# ನನ್ನ ನುಡಿ

ಮೊಪಾಸಾನ ಕಲಾಕೃತಿಗಳನ್ನು ಆಸ್ಥೆಯಿಂದ ಅವಲೋಕಿಸುವಾಗ ಕನ್ನಡ ಬಲ್ಲವರಿಗೆ ಇವನ ಕೃತಿಗಳ ದರ್ಶನವಾಗಬೇಕು ಎಂಬ ವಿಚಾರ ಸುಳಿಯುತ್ತಲಿತ್ತು. ಒಮ್ಮೆ ಒಂದು ಇಂಗ್ಲಿಷ ಮಾಸಪತ್ರಿಕೆಯ ಹಳೆಯ ಸಂಚಿಕೆಯಲ್ಲಿ ಇವನ ಕತೆಯೊಂದು ನನಗೆ ದೊರೆಕಿತು. ಅದರಲ್ಲಿ ಆ ಪತ್ರಿಕೆಯ ಸಂಪಾದಕರು ಆ ಕತೆಗೆ 'One of the greatest short stories of the world' ಎಂದು ಬರೆದಿದ್ದರು. ಆ ಕತೆಯನ್ನು ಒಮ್ಮೆ ಬಿಟ್ಟು ಎರಡು ಸಲ ಓದಿದೆ. ಬಲು ಮೆಚ್ಚಿದೆನು. ಇಂಥ ಕೃತಿಗಳು ನನ್ನ ತಾಯ್ನುಡಿಯಲ್ಲಿ ಅವಶ್ಯವಾಗಿ ಬರಬೇಕೆಂಬ ವಿಚಾರದಿಂದ ಈ ಅನುವಾದನ ಕಾರ್ಯವನ್ನು ಕೈಕೊಂಡೆನು. ಅದರ ಫಲವೇ ಈ ಸಂಗ್ರಹವೆಂದು ಬೇರೆ ಹೇಳಬೇಕಾಗಿಲ್ಲ.

ಒಂದೊಂದು ಉದ್ದೇಶದಿಂದ ನನಗೆ ಸರಿ ಕಂಡ ಕೆಲ ಕತೆಗಳನ್ನು ಈ ಕತೆಗಾರನ ಅಸಂಖ್ಯ ಕತೆಗಳಿಂದ ಆಯ್ದುಕೊಂಡಿದ್ದೇನೆ. ಇವೆಲ್ಲ ಕತೆಗಳು ಒಂದೊಂದು ತರದ ಜಾತಿಯವೆಂದು ಹೇಳಿದರೆ ತಪ್ಪಾಗದು. ಇವನ ಕತೆಗಳಲ್ಲಿ ಅತಿ ಶ್ರೇಷ್ಠವಾದ ಕೆಲವು ಕತೆಗಳಿವೆ. ಅವುಗಳನ್ನು ಅನೇಕರು ಈಗಾಗಲೇ ಭಾಷಾಂತರಿಸಿ ಪ್ರಕಟಿಸಿದ್ದಾರೆ. ನಾನು ಮಾತ್ರ ಅವುಗಳನ್ನು ಬೇಕೆಂತಲೆ ಬಿಟ್ಟು ಬೇರೆಯವುಗಳನ್ನೇ ಆರಿಸಿದ್ದೇನೆ. ಮತ್ತು ಅನುವಾದಿಸುವಲ್ಲಿ ಕೆಲ ಕೆಲ ಬದಲಾವಣೆಗಳನ್ನು ತಕ್ಕಂತೆ ಮಾಡಿಕೊಂಡಿದ್ದೇನೆ.

ಕತೆಗಳ ಜೀವನ ಫ್ರೆನ್ನದೇಶದ ಸಮಾಜ ಚಿತ್ರ; ಭಾಷೆ ಕನ್ನಡ. ಅಲ್ಲಿಯ ಜೀವನ ಚಿತ್ರವು ಹೇಗಿದೆಯೆಂಬುದರ ಕಲ್ಪನೆಯು ಈ ಕತೆಗಳನ್ನೋದಿದವರಿಗೆ ಸಹಜವಾಗಿ ತಿಳಿದುಬರುವಂತಿದೆ.

ಈ ಮುದ್ರಣದಲ್ಲಿ ಮೊಪಾಸಾನ ಜೀವನ ಪರಿಚಯವನ್ನು ಹೆಚ್ಚಿಗೆ ಸೇರಿಸಿದೆ. ಗ್ರಂಥಕರ್ತನ ಪರಿಚಯವು ಅವನ ಕೃತಿಗಳನ್ನು ತಿಳಿದುಕೊಳ್ಳಲು ಆವಶ್ಯಕವೆನಿಸಿದ್ದರಿಂದ ಇಲ್ಲಿ ಸಂಗ್ರಹಿಸಿಕೊಡಲಾಗಿದೆ. ಈ ಪುಸ್ತಕವನ್ನು ಅತ್ಯವಸರದಿಂದ ಮುದ್ರಿಸಿಕೊಟ್ಟದ್ದಲ್ಲದೆ, ಪ್ರಕಟಿಸುವದಕ್ಕಾಗಿಯೇ ನೆರವನ್ನಿತ್ತ ವಿಜಯ ಮುದ್ರಣಾಲಯದ ಶ್ರೀ. ಎನ್. ಎ. ಹೊಸಕೇರಿ ಇವರನ್ನು ಅಭಿನಂದಿಸದಿರಲಾರೆವು.

— ಅನುವಾದಕ

# ಗಾಯ್ ಡಿ ಮೊಪಾಸಾ

( ೧೮೫೦–೧೮೯೩ )

ಇವನ ಜೀವನವು ದುಃಖಮಯವಾದುದು. ಬಡತನದ ಬವಣೆಯೂ ಮಿತಿಮೀರಿ ಗತಿಗೆಡಿಸಿತು. ಕಡೆಗೆ ಅವನಿಗೆ ಹುಚ್ಚೂ ಹಿಡಿಯಿತು. ಆದರೆ ಅವನು ರಚಿಸಿದ ಸಾಹಿತ್ಯವು ಎಲ್ಲರ ಮೆಚ್ಚುಗೆಗೆ ಪಾತ್ರವಾಗಿದೆ.

ಫ್ರಾನ್ಸದೇಶದ ಸಣ್ಣ ಕತೆಗಾರರಲ್ಲಿ ಶ್ರೇಷ್ಠನು, ಅದ್ವಿತೀಯನು. ಅನೇಕ ಕಾದಂಬರಿಗಳನ್ನು ಬರೆದಿದ್ದಾನೆ, ಅವು ಜನರ ಮೆಚ್ಚುಗೆಗೆ ಪಾತ್ರವಾಗಿವೆ. ಎಲ್ಲ ಭಾಷೆಗಳ ಸಣ್ಣ ಕತೆಗಳ ಜಗತ್ತಿನಲ್ಲಿಯೇ ಇವನ ಕತೆಗಳಿಗೆ ಪ್ರಥಮ ಸ್ಥಾನವಿದೆ ಇವನ ಬರವಣಿಗೆಯ ರೀತಿಯಾದರೂ ಒಂದು ತೆರದ ವಿಶಿಷ್ಟ ಮಾರ್ಗ ಪ್ರವರ್ತಕವಾದುದು. ಅನೇಕಾನೇಕ ಕತೆಗಳಲ್ಲಿ ಒಂದೆರಡು ಕತೆಗಳನ್ನಂತೂ ಎಂದಿಗೂ ಮರೆಯುವಂತಿಲ್ಲ. ಆದರೂ ಬಹಳ ಕತೆಗಳು ಸ್ವಂತ ಜೀವನಕ್ಕೆ ಒದಗಿದ ಆಪತ್ತಿನ ಚಿತ್ರಗಳೇ ಎಂಬಂತೆ ಬಲು ಮಾರ್ಮಿಕವಾಗಿವೆ. ನಿರೂಪಣ ಶಕ್ತಿಯು ಸೂತ್ರಬದ್ಧವಾದುದು. ಕಾಲ್ಪನಿಕವೆಂದೆನಿಸದಷ್ಟು ಕಥಾ ಸಂವಿಧಾನವು ವಾಸ್ತವವಾದುದು. ಕಥಾ ಸನ್ನಿವೇಶವೂ ತೀರ ಬಳಕೆಯ ಜೀವನದಲ್ಲಿಯದು. ಕಥೆಗಳ ತಿರುಳು ಕರುಳನ್ನು ಕರಗಿಸುವಂತಹದು. ಇಂಥ ಶ್ರೇಷ್ಠ ಸಾಹಿತ್ಯಿಕನ ಜನ್ಮಭೂಮಿ ಫ್ರಾನ್ಸ. ಅಲ್ಲಿ ಹುಟ್ಟಿ, ಬೆಳೆದು, ಬೆಳಗಿ, ಹುಚ್ಚು ಹಿಡಿದ ಇವನು, ಬದುಕಿದುದು ಕೂಡ ೪೩ ವರುಷ ಎಂಥೆಂಥ ಅನುವು ಆಪತ್ತುಗಳಿಗೆ ಎದೆಗೊಟ್ಟು ಜೀವನಪಥವನ್ನು ನೂಕಿದ ಗಾಯ್ ಡಿ ಮೊಪಾಸಾನು ಮಾಡಿದ ಸಾಹಿತ್ಯ ಸೇವೆಯು ಎಂದೆಂದಿಗೂ ಚಿರಸ್ಮರಣೀಯವಾಗಿದೆ; ಚಿರಂತನೀಯವಾಗಿದೆ.

## ಜೀವನ ಪರಿಚಯ

ಇಡಿ ಪ್ರಪಂಚದಲ್ಲಿಯೆ ಅಸಂಖ್ಯ ಓದುಗರು ಗಾಯ್ ಡಿ ಮೊಪಾಸಾನ ಗ್ರಂಥಗಳನ್ನು ಇಂದಿಗೂ ಬಲು ಉತ್ಸುಕತೆಯಿಂದ ಓದುತ್ತಿದ್ದಾರೆ. ಇವನು ನಿರ್ಮಿಸಿದ ಉಚ್ಚತರಗತಿಯ ಸಾಹಿತ್ಯವೇ ಅವನಿಗಿಷ್ಟೊಂದು ಶ್ರೇಷ್ಠ

ತರಗತಿಯ ಸ್ಥಾನವನ್ನು ವಿ:ೀಸಲಾಗಿರಿಸಿದೆ. ೧೯ನೆಯ ಶತಕದ ಸಾಹಿತ್ಯಿಕರಲ್ಲಿ ಮೊಪಾಸಾನಿಗಿರುವ ಸ್ಥಾನವು ಅದ್ವಿತೀಯವಿದೆ. ಅದರಂತೆ ಆವನ ನಂತರವೂ ಅಂತಹರಾರೂ ಉದಯಿಸಿಲ್ಲೆನಬಹುದು. ಕತೆಗಾರರ ಬಳಗವಂತೂ ಇವನಿಗೆ ಚಿರ ಋಣಿಯಾಗಿದೆ. ಮೊಪಾಸಾನ ಜೀವನವು ಆವನ ಕತೆಗಳಂತೆಯೆ ದುಃಖಾಂತವಿದೆ ಅವನ ಜೀವನದ ಅಧಿಷ್ಠಾನ ದೈವವೇ ಕಲಾ ರೂಪದಿಂದ ಬೆಳಗಿ ಅಜರಾಮರ ಕೀರ್ತಿ ಪಡೆಯಿತೆಂದು ಹೇಳಬಹುದು.

ಇವನು ಜನಿಸಿದುದು ೧೮೫೦ನೆಯ ಜೂನ ೫. ಫ್ರಾನ್ಸದೇಶದ ಸೇನ್-ಆ-ಫೈರಿಯರ ಜಿಲ್ಲೆಯ ಮಿರೋಮ್ನ್ನಿಬ ಎಂಬಲ್ಲಿ. ತಂದೆ ಗುಸ್ತಾವ್ ಡಿ ಮೊಪಾಸಾನು ಲೌರೆನ್ ಪ್ರಾಂತದವನು. ತಾಯಿ ಲೌರಲ್ ಪ್ವಾಟ್ವ್ಹೆ ಎಂಬವಳು ನಾರ್ಮಂಡಿ ವಾಸಿಯು ಅದ್ದರಿಂದ ತಂದೆಯು ಉಚ್ಚ ಕುಲೋತ್ಪನ್ನನಿದ್ದರೂ ನಾರ್ಮಂಡಿಯಲ್ಲಿ ನೆಲೆಸಬೇಕಾಗಿ ಬಂದಿತು. ಮೊಪಾಸಾನ ಅಜ್ಜನಿಗೆ ರುಆ ನಗರದ ಸಮೀಪದ ನ-ವೀಲ್-ಶಾಡ್ವಾ-ಜೈಲ್ ಎಂಬಲ್ಲಿ ಕೆಲವೊಂದು ಭೂಮಿಯಿತ್ತು. ಅದು ಅಜ್ಜನ ತರುವಾಯ ಮೊಪಾಸಾನ ತಂದೆಗೆ ಪರಂಪರವಾಗಿ ಬಂದಿತ್ತು. ಪಿತ್ರಾರ್ಜಿತ ಆಸ್ತಿಯು ಕಡಮೆಯಾಗಲು ಅವನು ಪ್ಯಾರಿಸ್‌ದಲ್ಲಿ ದಲಾಲಿಯ ವ್ಯವಹಾರ ಸಾಗಿಸುತ್ತಿದ್ದನು.

ಮೊಪಾಸಾನ ಶಿಕ್ಷಣವು 'ಯೀ-ವಟೋ'ದಲ್ಲಿ ಆರಂಭವಾಗಿ ರುಆ ನಗರದ ಹೈಸ್ಕೂಲಿನಲ್ಲಿ ಮುಂದುವರಿಯಿತು. ಇವನು ಸಾಧಾರಣ ತರಗತಿಯ ವಿದ್ಯಾರ್ಥಿ; ಆದರೂ ಆಗಲೆ ಅವನ ಸಾಹಿತ್ಯ ಪ್ರೇಮವು ವಿಶಿಷ್ಟ ತೆರವಾಗಿದ್ದು ಕಾವ್ಯರೂಪದಲ್ಲಿ ಪ್ರಕಟವಾಗುತ್ತಿತ್ತು. ಆಗ ಅವನಿಂದ ರಚಿತವಾದ ಕವನಗಳು 'ಸೃಷ್ಟಿಕರ್ತ' ಎಂಬ ಗ್ರಂಥರೂಪವಾಗಿ ಇಂದಿಗೂ ಮೆರೆಯುತ್ತಲಿದೆ.

ಸಾಹಿತ್ಯ ಪ್ರೇಮವೆಲ್ಲಿ? ದಲಾಲಿಯ ವ್ಯವಹಾರವೆಲ್ಲಿ? ಒಂದಕ್ಕೊಂದು ಅಸಂಬದ್ಧ; ಒಂದೆಡೆ ಸೇರಿ ಬಾಳುವದು ಸಾಧ್ಯವಿಲ್ಲ. ಆದರೆ ಇವನ ಪರಿಸ್ಥಿತಿಗೆ ಎರಡೂ ಸಾಗಬೇಕಾಗಿದ್ದವು. ನಾರ್ಮನ್ ಜಾತಿಯ ಪ್ರಸಿದ್ಧ ಸಾಹಿತ್ಯಿಕನಾದ ಗುಸ್ತಾವ್ ಫ್ಲಾಬೇರ್ ಎಂಬ ಮಹಾ ಮೇಧಾವಿಯು ಮೊಪಾಸಾನ ತಾಯಿಯ ಅಭಿನ್ನಹೃದಯ ಮಿತ್ರನಾಗಿದ್ದನು. ಯಾಕೆಂದರೆ ಇವರಿಬ್ಬರ ಮನೆತನಗಳಲ್ಲಿಯೆ ಅಂಥ ಗಾಢವಾದ ಸ್ನೇಹವು ಬೆಳೆದು ಬಂದಿತ್ತು. ಆದರಿಂದ ಮೊಪಾಸಾ ಮತ್ತು ಫ್ಲಾಬೇರರಲ್ಲಿ ಅಭೇದ್ಯವಾದ ಸಂಬಂಧವು

ನೆರೆಸಿದ್ದಿತು. ಅಂದರೆ ಮೊಪಾಸಾನ ಕೃತಿಗಳ ಜನ್ಮದಾತನು ಫ್ಲಾಬೇರನಾಗಿದ್ದನು ಆದರೂ ಮೊಪಾಸಾನು ಪ್ರಕಟವಾಗಿ ಅವನನ್ನು ತನ್ನ ಗುರುವೆಂದು ಮನ್ನಿಸದಿದ್ದರೂ ಅವನ ಪ್ರಭಾವವು, ಮುದ್ರೆಯು ಮೊಪಾಸಾನ ಕೃತಿಗಳಲ್ಲಿ ಕಾಣಬರುವುದೇನು ಸುಳ್ಳಲ್ಲ ಇಬ್ಬರೂ ಒಂದೇ ಕಲೆಯ ಪಿತಾಪುತ್ರರೆಂದರೂ ಸಲ್ಲುವಂತಿದೆ ಪ್ರತಿಭಾಸಂಪನ್ನರು ಹುಟ್ಟುತ್ತಾರಲ್ಲದೆ ಮಾಡಿದರೆ ಆಗರು ಎಂಬ ಮಾತನ್ನು ಯಾರೂ ಒಪ್ಪುವಂತಿದೆ.

ಫ್ಲಾಬೇರನು ಮೊಪಾಸಾನಿಗೆ ಮಾರ್ಗದರ್ಶಕನು, ನಿರ್ಣಾಯಕನು, ಬುದ್ಧಿ ಹೇಳುವಂತಹ ಮಿತ್ರನೂ ಆಗಿದ್ದನು. ಮೊಪಾಸಾನ ಪ್ರಥಮ ಪ್ರಯತ್ನಗಳ ಲೇಖನಗಳನ್ನು ಓದಿ, ಸಮಾಲೋಚಿಸಿ ಔಚಿತ್ಯಾನೌಚಿತ್ಯಗಳನ್ನು ತೋರಿಸಿಕೊಟ್ಟು, ಹೊಗಳುವಲ್ಲಿ ಹೊಗಳಿ, ತೆಗಳುವಲ್ಲಿ ತೆಗಳಿ, ಇವನು ಒಳ್ಳೆ ಮಾರ್ಗವನ್ನು ಹಿಡಿಯುವಂತೆ ಮಾಡಿದ ಶ್ರೇಯಸ್ಸು ಫ್ಲಾಬೇರನದೇ ಎನಬಹುದು ಅದರಿಂದ ಇವನು ನಿರ್ದಯನಾಗಿ ಆತ್ಮಾಲೋಚನಪರನಾದನು; ನಿರೀಕ್ಷಣಶಕ್ತಿಯೂ ವಿಕಸಿತವಾಯಿತು. ಶುದ್ಧ ಶಬ್ದವಿನ್ಯಾಸದಿಂದ ವಸ್ತುಗಳ ವರ್ಣನೆ ಮಾಡುವುದರಲ್ಲಿ ಸಿದ್ಧಹಸ್ತನಾಗಲು ಶಕ್ಯವಾಯಿತು ಹೀಗೆ ದಲಾಲಿಯ ಮಗನ ಪರಿಚಯವು ಆಶ್ಚರ್ಯಜನಕವಾಗುವಂತೆ ವಿದ್ವಾಂಸರಲ್ಲಿ ಬೆಳೆಯತೊಡಗಿತು. ಅಂತೆಲೆ ಫ್ಲಾಬೇರನು ದಲಾಲಿಯ ಉದ್ಯೋಗವು ಇವನಿಗೆ ತಕ್ಕುದಲ್ಲೆಂದು ವಿರೋಧಿಸುತ್ತಿದ್ದನು

ಮೊಪಾಸಾನು ನೌಕರಿ ಮಾಡಬೇಕೆಂಬ ಮನೆಯವರ ಹುಚ್ಚಿನ ಮೇರೆಗೆ ಮೊದಲು ನೌಕಾವಿಭಾಗದ ಮಂತ್ರಿಯ ಕಚೇರಿಯಲ್ಲಿ ಸೇರಿಕೊಂಡನು ಕೆಲ ಕಾಲದ ಮೇಲೆ ಅಲ್ಲಿಂದ ಶಿಕ್ಷಣಮಂತ್ರಿ ಮಂಡಲಕ್ಕೆ ವರ್ಗಾಯಿಸಲ್ಪಟ್ಟನು. ತಾನು ಕಾರಕೂನನು; ಆ ಕೆಲಸವನ್ನು ದಕ್ಷತೆಯಿಂದ ಮಾಡಬೇಕೆಂಬ ಪರಿವೆಯಿಲ್ಲದೆ ಲೇಖನ ನಿರ್ಮಿತಿಯಲ್ಲಿ ಆಸಕ್ತನಾಗಿರುವನೆಂಬ ದೂರು ವರಿಷ್ಠ ಅಧಿಕಾರಿಗಳ ಕಿವಿಯ ವರೆಗೂ ಹೋಯಿತು.

ಅವನು ಉಳಿದ ಸಮಯವನ್ನು ಡೋಣಿ ನಡಿಸುವದರಲ್ಲಿ, ವ್ಯಾಯಾಮ ಮಾಡುವದರಲ್ಲಿ, ಕಾವ್ಯ ನಿರ್ಮಿತಿಯಲ್ಲಿ ಕಳೆಯುತ್ತಿದ್ದನು. ಆಗಿನ ಕಾಲದ ಪ್ರಸಿದ್ಧ ಸಾಹಿತ್ಯಿಕರಾದ ಡೌಡೆ, ಕಟ್ಯೂಲ, ಎಮಿಲ್-ಝೋಲಾ ಮೊದಲಾದವರ ಪರಿಚಯವನ್ನು ಮಾಡಿಕೊಂಡನು ಮೊದಮೊದಲು ಇವನ ಪ್ರತಿಭೆಯು

ಸೆಲೆಯು ನೆಲೆಯು ಫ್ಲಾಬೇರನಿಗೂ ಆಗಿರಲಿಲ್ಲ. ಕ್ರಮೇಣವಾಗಿ ಅದರ ಪರಿಚಯವು ಫ್ಲಾಬೇರನಿಗೆ ಪ್ರತ್ಯಕ್ಷ ಅನುಭವಕ್ಕೆ ಬಾರದಿರಲಿಲ್ಲ ಫ್ರಾನ್ಸ-ಜರ್ಮನ್ ಯುದ್ಧದಲ್ಲಿ ಫ್ಲಾಬೇರನು ಭಾಗವಹಿಸಿ, ತೀರಿಕೊಳ್ಳುವವರೆಗೂ ಮೊಪಾಸಾನು ಫ್ಲಾಬೇರನ ಶಿಷ್ಯತ್ವವನ್ನು ಅಂಗೀಕರಿಸಿದ್ದನು

ಮೋಪಾಸಾನ ಪ್ರತಿಭೆಯು ಮೆಲ್ಲಮೆಲ್ಲನೆ ಪರಿಪಕ್ವವಾಗುತ್ತ ನಡೆಯಿತು. ೧೮೭೦ರಲ್ಲಿ ಅವನು ನೌಸಿಖುಯೆ ಎಂಬಲ್ಲಿದ್ದನು. ಆಗ ಕೆಲ ಕವಿತೆ, ನಾಟಕಗಳನ್ನು ರಚಿಸತೊಡಗಿದ್ದನು. ಕವಿತೆಗಳು ಮಧ್ಯಮತರಗತಿಯು ವಾದರೂ ಕೆಲವು ಚೆನ್ನಾಗಿಯೇ ಇದ್ದವು ಆದರೆ ಆಖ್ಯಾಯಿಕೆಗಳು ಮಾತ್ರ ಒಳ್ಳೆಯವೇ ಆಗಿದ್ದವು ೧೮೭೯ರಲ್ಲಿ ಆನ್‌ಟ್ರಾಟ ಎಂಬ ನಗರದಲ್ಲಿ ಇವನೆ ಬರೆದ ನಾಟಕವು ಎರಡು ಸಲ ಅಭಿನಯಿಸಲ್ಪಟ್ಟಾಗ, ಫ್ಲಾಬೇರ್, ಟುರ್ಜನೀಫ ಮೊದಲಾದವರು ಪ್ರೇಕ್ಷಕರಾಗಿದ್ದಾಗ ಇವನು ಸ್ತ್ರೀಪಾತ್ರವನ್ನು ವಹಿಸಿ ರಂಗಮಂಡಪದಲ್ಲಿ ತನ್ನ ನಟನಾ ಚಾತುರ್ಯವನ್ನು ಪ್ರಕಟಿಗೊಳಿಸಿದನು ೧೮೮೦ ರ ಸುಮಾರಿಗೆ ಇವನ ಪ್ರತಿಭೆ ಅಪ್ರತಿಮವಾಗಿ ಬೆಳಗತೊಡಗಿತು ಆಗ ಮೂವತ್ತೆ ವರುಷ ಕಾವ್ಯ, ಕಥನ ಕೃತಿಗಳು ಪೂರ್ಣಾವಸ್ಥೆಯನ್ನು ಮುಟ್ಟಿದ್ದವು. ಕಾವ್ಯರಚನಾ ಕಾಲವು ಇಲ್ಲಿಗೆ ಮುಗಿಯಿತೆನ್ನಬಹುದು ಕಥಾರಚನೆಯಲ್ಲಿ ಇವನು ಸಿದ್ಧಹಸ್ತನಾದನು. ಡೆ-ವೆಯರ್ ಎಂಬ ಇವನ ಕವಿತಾಸಂಗ್ರಹವನ್ನು ಫ್ರೆಂಚ ಸರಕಾರವು ಜಪ್ತ ಮಾಡಬೇಕೆಂದಿತು; ಆದರೆ ಕೌನ್ಸಿಲ್ ಸದಸ್ಯನಾದ ಕಾರ್-ಡಿ-ಯೆ ಎಂಬವನ ಕೃಪೆಯಿಂದ ಆ ಪ್ರಸಂಗ ಬಾರದೆಹೋಯಿತು. ಇದನ್ನು ಕಂಡು ಫ್ಲಾಬೇರ್‌ನಿಗೆ ಹರುಷ ವಾಗಿ, ತನ್ನ 'ಮ್ಯಾಡಮ್ ಬೊವಾರಿ' ಎಂಬ ಪುಸ್ತಕಕ್ಕೂ ಹಾಗೆಯೆ ಪೋಲೀಸರ ಕಟಾಕ್ಷವು ಬಿದ್ದಿತ್ತೆಂದು ತಿಳಿಸಿದನು. ಅದೇ ವರುಷ ಪ್ರಕಟವಾದ ಝೋಲಾ, ಎಲಕ್ಸಿಸ್, ವೂಯಿಜಮಾ, ಆರೀಕ ಮೊದಲಾದವರ ಐತಿಹಾಸಿಕ ಪ್ರಸಿದ್ಧಿಯನ್ನು ಪಡೆದ ಕಥಾಸಂಗ್ರಹದಲ್ಲಿ ಮೊಪಾಸಾನ ಕತೆಯೂ ಒಂದು ಸೇರಿಸಲ್ಪಟ್ಟಿತು. ೧೮೮೧ ರಲ್ಲಿ ಲಿ-ಮೆ-ಜಾ-ಟೈಲಿಯೆ ಎಂಬ ಗ್ರಂಥವು ಪ್ರಕಟವಾದ್ದರಿಂದ ಇವನ ಕೀರ್ತಿಯು ಇನ್ನಿಷ್ಟು ಹಬ್ಬಿತು. ೧೮೮೩ ರಲ್ಲಿ 'ಫಿಫೀ' ಎಂಬ ನೀಳ್ಗತೆಯನ್ನು ಬರೆದು, ದೊಡ್ಡ ಕತೆಗಳನ್ನೂ ಬರೆಯಬಲ್ಲ ಶಕ್ತಿ ಇದೆಯೆಂದು ತೋರಿಸಿದನು. ಇದೇ ವರುಷ 'ಯೂನವೀ' ಎಂಬ

ಕರುಣಾಜನಕ ಕಾದಂಬರಿಯು ಪ್ರಸಿದ್ಧವಾಯಿತು. ಇದರಲ್ಲಿ ದೋಷ ರಹಿತ ಸ್ತ್ರೀಯೊಬ್ಬಳ ಜೀವನ ಸಂಗ್ರಾಮದ ಕರುಣ ಕಥೆಯಿದೆ,—ವಿವಾಹ, ಪುತ್ರ, ಅಕಾಲಿಕ ವೃದ್ಧಾವಸ್ಥೆ, ಭಗ್ನ ಹೃದಯ ಜೀವನವೆಂದರೆ ದುಃಖದೊಡನೆ ಹೋರಾಟ; ಕಡೆಗೆ ಮೊಮ್ಮಗನಿಂದ ಸುಖವು ಪ್ರಾಪ್ತವಾಗಬಹುದು ಎಂಬಲ್ಲಿಗೆ ಗ್ರಂಥಕಾರನು ಕೈಬಿಟ್ಟಿರುವ ಕಥಾಸನ್ನಿವೇಶ! ಇಷ್ಟು ಮನೋವೇಧಕವಾದ ಕಾದಂಬರಿಯು ಜನರ ದೃಷ್ಟಿಯನ್ನು ಸೆಳೆಯದೆ ಬಿಟ್ಟೀತೆ? ನೀಳ್ಗತೆ, ಕಾದಂಬರಿಗಳಲ್ಲದೆ ಸಣ್ಣ ಕತೆಗಳಿಗೆ ಅಳತೆಯೇ ಇಲ್ಲವೆನಬಹುದು. ಹತ್ತೇ ವರುಷಗಳಲ್ಲಿ ಒಂದರ ಮೇಲೊಂದು ಗ್ರಂಥಗಳು ಪ್ರಕಟವಾದವು. ಇವುಗಳಲ್ಲದೆ ಸಾಹಿತ್ಯದ ಮೇಲೆಯೂ ಇವನು ತನ್ನ ವಿಚಾರಗಳ ಕುರಿತು ಒಂದೆರಡು ಪ್ರಬಂಧಗಳನ್ನೂ ಬರೆದಿದ್ದಾನೆ. ಕತೆಯೆಂದರೆ ಮೊಪಾಸಾ, ಮೊಪಾಸಾ ಅಂದರೆ ಕತೆ ಎಂದೆನ್ನುವಷ್ಟು ಇವನು ಪ್ರಸಿದ್ಧಿಯನ್ನು ಪಡೆದಿರುವನೆಂದರೆ ಅತಿಶಯೋಕ್ತಿಯಾಗಲಾರದು. ಇಂದಿಗೂ ಅವನ ಕೀರ್ತಿಯು ಅಷ್ಟೇ ಗೌರವದಿಂದ ಸಾಹಿತ್ಯಕ್ಷೇತ್ರದಲ್ಲಿ ಬೆಳಗುತ್ತಲಿದೆ.

ಈ ಕೀರ್ತಿಕಾಲವು ಮುಂದೆ ಬಲುದಿನ ಬಾಳಲಿಲ್ಲ. ಮೊಪಾಸಾನು ನೋಡಲು ಹೃಷ್ಟಪುಷ್ಟ ಕಾಣುತ್ತಿದ್ದನು. ಆದರೆ ಅವನ ಮಾತುಗಳು ಅಸಾಧಾರಣ ತರಗತಿಯವು. ವಿಧಿಯ ವಿಧಾನವಂತೆ ಅವನ ಜೀವನಾಂತ್ಯವು ದುಃಖಾಂತ್ಯವಾಯಿತು. ಕೆಲವು ವರುಷಗಳಿಂದ ತನಗೆ ಹುಚ್ಚು ಹಿಡಿಯುವದೆಂದು ಅವನು ಭಯಗೊಂಡಿದ್ದನು. ಅದಾಗಬಾರದೆಂದು ಕೆಲಸದಲ್ಲಿ ತೊಡಗುವದು, ಸಮಾಜದಲ್ಲಿ ಕಾಲ ಕಳೆಯುವದು, ದೇಶಪರ್ಯಟನ ಮಾಡುವದು ಇವೇ ಮುಂತಾದ ಕಾರ್ಯ ಕಲಾಪಗಳಲ್ಲಿ ಅವನು ತನ್ನ ಮನಸ್ಸನ್ನು ತೊಡಗಿಸುತ್ತಿದ್ದರೂ ಶಾಂತಿ ದೊರೆಯದೆ—ಎಲ್ಲವೂ ವ್ಯರ್ಥವಾಗಿ ಕಡೆಗೆ ಹುಚ್ಚು ಹಿಡಿದೇ ಬಿಟ್ಟಿತು. ೧೮೯೧ ರ ಪ್ರಾರಂಭಕ್ಕೆ ಆಯಿಕ್ಸ-ಲೆವ್ವೆ ಎಂಬ ಪಟ್ಟಣದಲ್ಲಿ ಅವನ ಕೊನೆಗಾಲವು ಬಂದಿತು. ಒಂದು ದಿನ ರಾತ್ರಿ ೨ ಗಂಟೆಯ ಸುಮಾರಿಗೆ ವಿಚಿತ್ರ ಚೀರಾಟವು ಕೇಳಬಂದಿತು. ಅದನ್ನು ಕೇಳಿದ ಅವನ ಚಾಕರನು ಗಾಬರಿಯಾಗಿ ನೋಡುತ್ತಾನೆ- ಮೊಪಾಸಾನಿಗೆ ಪೂರ್ತಿಯಾಗಿ ಹುಚ್ಚು ಹಿಡಿದು ಬಿಟ್ಟಿತ್ತು. ಅವನ ಕುತ್ತಿಗೆಯಿಂದ ರಕ್ತವು ಧಾರೆಯಾಗಿ ಹರಿಯುತ್ತಿತ್ತು. ಹುಲು ಜೀವನವು ಹೇಗೋ ಉಳಿಯಿತು; ಆದರೆ ಉಳಿದ

ಆಯುಷ್ಯವೆಲ್ಲ ಹುಚ್ಚರ ಆಸ್ಪತ್ರಿಯಲ್ಲಿಯೆ ಕಳೆಯಿತು. ಕಡೆಗೆ ಅಲ್ಲಿಯೇ ೧೮೯೩ ರ ಜುಲೈ ೬ ಕ್ಕೆ ೪೩ ನೆಯ ವಯಸ್ಸಿಗೆ ಅವನ ದೇಹಾಂತ್ಯವಾಯಿತು.

ಮೊಪಾಸಾನು ಕಲಾಭಿಜ್ಞನು ಅವನು ಅಸಾಧಾರಣನೂ, ವಿಚಿತ್ರನೂ ಇದ್ದಂತೆ ಅವನ ಕೃತಿಗಳೂ ಇವೆ. ಇಂದ್ರಿಯಗಳ ಮುಖಾಂತರ ಜೀವನದ ಮಾರ್ಮಿಕ ನಿರೀಕ್ಷಣೆಯನ್ನು ಇವನಂತೆ ಯಾರೂ ಮಾಡಲು ಶಕ್ತರಾಗಿರುವದಿಲ್ಲ ಇವನ ದೃಷ್ಟಿಯಲ್ಲಿ ಪುರುಷರು ನಿರ್ದಯರು, ಬುದ್ಧಿಹೀನರು ಜೀವನವು ಮೂರ್ಖತನದಿಂದ ತುಂಬಿದ್ದು ಮತ್ತು ದುಃಖಾಂತವಾದುದೆಂಬುದು ಸ್ಪಷ್ಟವಾಗಿ ಕಾಣುವಂತಿದೆ ೧೦ ವರುಷಗಳ ಅವಧಿಯಲ್ಲಿ ಇವನ ಕೃತಿಗಳ ೩೦ ಸಂಪುಟಗಳು ಪ್ರಕಾಶಿತವಾದವು ಇವುಗಳಲ್ಲಿ ಪೀಯುರ–ಎ–ಜಾ ಎಂಬ ಉಪನ್ಯಾಸವು ಸರ್ವಶ್ರೇಷ್ಠವೆಂದು ಗಣಿಸಲಾಗಿದೆ.

ಮೊಪಾಸಾನ ಕೃತಿಗಳು ಶೃಂಗಾರಮಯವೆಂದು ಹಲವರು ಆಕ್ಷೇಪ ಎತ್ತುತ್ತಾರೆ. ಶೃಂಗಾರವಿಲ್ಲದಿರುವ ಪ್ರಾಣಿಯು ಜಗದಲ್ಲಿ ಇದೆಯೋ ಇಲ್ಲವೋ ತಿಳಿಯದ ವಿಷಯ. ಆದರೂ ಇವನ ಕೃತಿಗಳಲ್ಲಿ ಪ್ರಾಧಾನ್ಯವಾಗಿ ಕಾಣುವ ವಿಧಾನವು ಶೃಂಗಾರವಿರದೆ ತಾತ್ವಿಕ ವಿವೇಚನೆಯ ತರ್ಕ ಸರಣಿಯು ಒಡೆದು ಕಾಣುತ್ತಿದೆಯೆಂಬದನ್ನು ಮರೆಯಲಾಗದು.

---

# ಪ ರಿ ವಿ ಡಿ


| | | |
|---|---|---|
| ೧ | ಸೇಬು ಹಣ್ಣಿನ ಉಂಡಿ | ೧ |
| ೨ | ಹುಚ್ಚಿ | ೧೪ |
| ೩ | ಕಾಕೋಟಿ | ೨೧ |
| ೪ | ಗುರುಮಹಾರಾಜರು | ೩೧ |
| ೫ | ಸೋಡಚೀಟಿ | ೪೧ |
| ೬ | ಮೋಯಿರೋನ್ | ೫೫ |
| ೭ | ತಪ್ಪು ತಿಳಿವಳಿಕೆ | ೬೭ |
| ೮ | ದಳವಾಯಿಯ ದೂತ | ೭೬ |
| ೯ | ಚಕ್ರತೀರ್ಥ | ೮೩–೯೪ |

# ಸೇಬು ಹಣ್ಣಿನ ಉಂಡಿ

ಗಗನಚುಂಬಿತವಾದ ಬೀಚ್‌ವೃಕ್ಷಗಳೊಳಗಿಂದ ತಪ್ಪಿಸಿಕೊಂಡು ಸೂರ್ಯಕಿರಣಗಳು ಹೊಲಗಳ ಮೇಲೆ ಬೆಳಕನ್ನು ಕೆಡುವುವುದು ಬಲು ಅಪರೂಪ. ಬೆಳೆದ ಹುಲ್ಲನ್ನು ಕೊಯ್ದುದರಿಂದಲೂ, ದನಗಳೂ ಕಚ್ಚಿ ಕಚ್ಚಿ ತಿಂದುದರಿಂದಲೂ ನೆಲವು ಅಲ್ಲಲ್ಲಿ ತಗ್ಗುದಿನ್ನೆಯಾಗಿ ಒಡೆದು ಕಾಣುತ್ತಿತ್ತು. ಎರಡು ದಿನದ ಹಿಂದಿನ ಮಳೆಯಿಂದಾದ ತಂಪು ಇನ್ನೂ ಆರಿದ್ದಿಲ್ಲ ಹಣ್ಣಿನ ಭಾರದಿಂದ ಬಾಗಿದ ಟೊಂಗೆಗಳಿಂದ ಕೆಲಕೆಲವು ಹಣ್ಣುಗಳು ಅಲ್ಲಲ್ಲಿ ಉದುರಿ ಬಿದ್ದಿದ್ದವು. ದಿನವೂ ಹೆಣಬೀಳ ದುಡಿದ ಹೋರೆಗಾರರು ಬೇಸತ್ತು ಮನೆಯ ಕಡೆಗೆ ಮುಖವನ್ನು ಹೊರಳಿಸಿದ್ದಾರೆ.

ಇಂಥ ಸಮಯದಲ್ಲಿ ಸೂರ್ಯನು ಒಣ್ಣಗುಂದಿ ಪಶ್ಚಿಮ ಕಡಲಲ್ಲಿ ಮುಳುಗಲು ಹೊರಟಿದ್ದಾನೆ. ಜನರಿಗೆ ಬೇರೆ ದಾರಿ ಯಾವುದಾದರೂ ಇದೆಯೇ— ? ಇರಬಹುದು. ತೋರಿಸುವವರಾರು ! ಎಲ್ಲರೂ ತಂತಮ್ಮ ಬಿಡಾರಗಳಿಗೆ ತೆರಳುವ ಮನಸ್ಸಿನವರು. ದಿನವೂ ಹೊತ್ತಾರೆದ್ದು ಒಂದೆ ಸವನೆ ದುಡಿದು ಬೆವರು ಸುರಿಸಿ, ಬೇಸತ್ತು, ವಿಶ್ರಾಂತಿಯನ್ನು ಪಡೆಯಲು ಆಧಾರವಾದ ಮನೆಗಳಿಗೆ ಯಾವಾಗ ಮುಟ್ಟುವೆವೋ ಎಂಬ ವಿಚಾರದಿಂದ ಕಾಲುಗಳನ್ನು ಮುಂದೆ ಚಲ್ಲುತ್ತಿದ್ದಾರೆ.

ಇಳಿಬಿದ್ದ ಮೊಗ; ಬಾಗಿದ ದೇಹ; ಒಂಟಿಯ ಹೆಜ್ಜೆ; ನೀಳವಾದ ತೋಳುಗಳು. ಇವುಗಳಿಂದ ಒಡೆದು ಕಾಣುವ ವಯಸ್ಸು ಆರುವತ್ತಕ್ಕೆ ಮಿಕ್ಕಿರಬಹುದೆಂದು ತೋರುವದು; ಆದರೂ ಆದ ವಯಸ್ಸು ಇನ್ನೂ ನಾಲ್ವತ್ತು. ಇಂಥ ಮನುಷ್ಯನೊಬ್ಬನು ಹೊರಬಾಗಿಲನ್ನು ದೂಡಿದನು. ಆದಾರೋ ಒಳಬಂದರೆಂಬ ಸದ್ದಾಯ್ತು ಅಲ್ಲಿಯೇ ಹೊರಬದಿಗೆ ಕಟ್ಟಿಹಾಕಿದ ನಾಯಿಯು ಬೊಗುಳಲಾರಂಭಿಸಿತು; ಸುರುವು ಮಾಡಿದ್ದೇ ತಡ—ಒಮ್ಮೆಲೆ ತೆಪ್ಪಗಾಗಿ, ಚಿನ್ನಾಟದಿಂದ ಬಾಲವನ್ನು ಅಲುಗಾಡಿಸುತ್ತ ಮೈಮೇಲೆ ಬೀಳಲು ಹವಣಿಸತೊಡಗಿತು. ಒಡೆಯನ ಗುರುತು ಹತ್ತಿತೆಂದೋ ಏನೋ—' ಏ ಫೈನಾಟ್ ' ಎಂಬ ಹೆಸರು ಕಿವಿಗೆ ಬಿದ್ದೊಡನೆ ಅದು ಕಟ್ಟಿದ ಸ್ಥಳದಲ್ಲಿಯೆ ಸುಮ್ಮನೆ ಬಿದ್ದುಕೊಂಡಿತು.

ಮನೆಯುಲ್ಲೊಬ್ಬ ಹೆಣ್ಣುಮಗಳು; ಒಂಟೆಲುಬಿನ ದೇಹ. ಉದ್ದವಾದ ಗೋಣು. ಉಟ್ಟತೊಟ್ಟ ಉಡಿಗೆತೊಡಿಗೆಗಳು ಮೈಯಲ್ಲಿ ನೆಟ್ಟಂತೆ ಕಾಣುವದರಿಂದ ತೆಳ್ಳನ್ನ ದೇಹವು ಬಹು ಸ್ಪಷ್ಟವಾಗಿ ಕಾಣುತ್ತಿತ್ತು. ಹಳ್ಳಿಗಾಡು ಹೆಣ್ಣುಮಗಳಂತೆ ಕೂದಲುಗಳು ತಲೆತುಂಬ ಕೆದರಿದ್ದುವು. ಬಣ್ಣಗೆಟ್ಟದ್ದರಿಂದ ಮುಖವು ಸಪ್ಪೆಯಾಗಿದ್ದಿತು. ಯಾರಾದರೂ ಅವಳನ್ನೀಗ ಕಂಡಿದ್ದರೆ ಅಂದಗೇಡಿ ಹೆಣ್ಣುಮಗಳೆಂದು ಸಹಜವಾಗಿ ಹೇಳಬಹುದಾಗಿದ್ದಿತು.

'ಏನು—ಹೇಗಿದೆ ?' ಎಂದು ಅವನು ಅವಸರವಸರದಿಂದ ಹೆಂಡತಿಯನ್ನು ಹತ್ತಿರ ಕರೆದು ಕೇಳಿದನು.

'ರಾತ್ರಿ ಕಳೆಯಲಾರ; ವೈದ್ಯರೂ ಮುಚ್ಚುಮರೆಯಿಲ್ಲದೆ ಹೇಳಿದ್ದಾರೆ. ಲಕ್ಷಣಗಳೂ ಅವಲಕ್ಷಣಗಳಾಗಿಬಿಟ್ಟವೆ' ಎಂದು ಅವಳು ವಿಷಣ್ಣ ಮುಖಭಾವದಿಂದ ಹೇಳಿದಳು

ಇಬ್ಬರೂ ಒಳಹೊಕ್ಕು ಅಡುಗೆಮನೆಯೊಳಗಿಂದ ಹಾಯ್ದು ಮಲಗುವ ಕೋಣೆಗೆ ಬಂದರು. ಇಳಿಜಾರಾದ ನೆಲ; ಕತ್ತಲುಗವಿ. ಮಿಣುಕು ಮಿಣುಕಾಗಿ ಉರಿಯುವ ಚಿಕ್ಕ ದೀವಿಗೆಯೊಂದು ಕಿಡಿಕಿಯಲ್ಲಿಟ್ಟಿದೆ. ಗಾಳಿ ಒಳಗೆ ಬರದಂತೆ ಕಿಡಿಕಿಯ ಹೊರಬದಿಗೆ ಖಾಕಿಯರಿವೆಯನ್ನು ಬಡಿದಿದ್ದಾರೆ. ಎಷ್ಟು ವರ್ಷದ ಹಳೆಯ ಮನೆಯೋ ಏನೋ—ತೊಲೆ-ಜಂತೆಗಳೆಲ್ಲವೂ ಇಲ್ಲಣದಿಂದ ಹೊದಿಸಿವೆ. ಹೊಗೆಯಿಂದ ಕಪ್ಪಾಗಿ ಡಾಂಬರಿನಿಂದ ಸಾರಿಸಿದಂತಿವೆ. ಹಗಲೆ ಇರುಳಾಗಿದ್ದುದರಿಂದ ಇಲಿಗಳ ಕಾಟ—ಕಿರುಚಾಟ ಹಗಲು ಹಾಡೇ ಹೆಚ್ಚಾಗಿಬಿಟ್ಟಿದೆ. ಕೋಣೆಯು ನೆಲ್ಲಕ್ಕಿಯನ್ನು ಕಾಣದ್ದರಿಂದ ಗೊಟೆಗುಣಿಗಳಿಗೇನು ಕಡಿಮೆಯಿರಲಿಲ್ಲ. ತಗ್ಗು-ದಿನ್ನೆಯಾದ ನೆಲ—ನಡೆಯುವದೆಂದರೆ ಎಷ್ಟು ಎಚ್ಚರಪಟ್ಟರೂ ಎಡವಿ ಬೀಳಲು ತಡವಾಗುತ್ತಿದ್ದಿಲ್ಲ. ಇಂಥದರಲ್ಲಿಯೇ ಒಂದು ಮುರುಕು ಹೊರಸಿನ ಮೇಲೆ ಹರಹರಕಾದ ಹಾಸಿಗೆ ಹಾಸಿದೆ. ಹಾಸಿಗೆಯಿಂದ 'ಫೊರ್‌ಫೊರ್' ಎಂಬ ಧ್ವನಿಯು ಮಾತ್ರ ಕೇಳಬರುತ್ತಿದೆ. ಆ ಮೆತ್ತಗಿನ ಧ್ವನಿ ಉಸಿರು ಉಳಿದೊಬ್ಬ ಮುದುಕನದು,—ಆ ಹೆಣ್ಣುಮಗಳ ತಂದೆ.

ಮೇಲುಸಿರಿಟ್ಟ, ಶಬ್ದವು ಇನ್ನೂ ಇಹಲೋಕದ ಯಾತ್ರೆಯು ತೀರಿಲ್ಲೆಂದು ಸಾಕ್ಷಿ ಕೊಡುತ್ತಿದೆ.

ಗಂಡಹೆಂಡರಿಬ್ಬರೂ ಹಾಸಿಗೆ ಹತ್ತಿರ ಹೋದರು. ಕುತೂಹಲ ಮುಖಭಾವದಿಂದ ನೋಡಿದರು—ಬೇನೆಯಿಂದ ಬಳಲುವ ಆ ಮುದುಕನನ್ನು.

'ಈಗ ಎಲ್ಲ ತೀರಿಬಿಟ್ಟಿದೆ; ಆಶೆ ಹಿಡಿಯುವಂತಿಲ್ಲ ರಾತ್ರಿ ಪಾರಾಗುವದು ಅಸಾಧ್ಯ' ಎಂದು ಅಳಿಯನು ತೀರ ಮೆಲುದನಿಯಿಂದ ನುಡಿದನು.

'ಮಧ್ಯಾಹ್ನ ಹನ್ನೆರಡು ಗಂಟೆಯಿಂದ ಈ ಸಪ್ಪಳವು ಸುರುವಾಗಿದೆ' ಎಂದು ಹೆಂಡತಿಯು ಮಾತನಾಡಿದಳು.

ಇಬ್ಬರೂ ಪಿಟ್ಟೆಂದು ಮಾತನಾಡಲಿಲ್ಲ. ತೆಪ್ಪಗೆ ನಿಂತು ಕಣ್ಣು ಅರಳಿಸಿ ನೋಡುತ್ತಿದ್ದರು ಆ ಮುದುಕನ ಕಣ್ಣುಗಳು ಮುಚ್ಚಿದ್ದವು. ಮಣ್ಣಿನ ಹಾಗೆ ಮುಖವು ಕಪ್ಪಿಟ್ಟಿದ್ದಿತು. ಯಾವ ಅರಿವೂ ಇರಲಿಲ್ಲ. ಎಲುಬಿನ ಹಂದರದ ದೇಹವು ಒಣಕಲ ಕಟ್ಟಿಗೆಯಂತೆ ಬಿದ್ದಿದೆ. ಬಾಯಿ ಮಾತ್ರ ಅರ್ಧ ತೆರೆದಿದ್ದಿತು. ಎಂತಲೆ 'ಘೊರ್‌ಘೊರ್' ಎಂಬ ಶಬ್ದವು ಎಡೆಬಿಡದೆ ಹೊರಡುತ್ತಿತ್ತು. ಎದೆಯ ಮೇಲಿನ ಕಂಬಳಿ ಮಾತ್ರ ಉಸಿರಾಟದ ಏರಿಳಿತಕ್ಕೆ ಸ್ವಲ್ಪ ಕೆಳಗೆ ಮೇಲಾಗುತ್ತಿತ್ತು

'ಅವನು ಹೋಗುವವನೇ. ಋಣವು ತೀರಿದಂತೆ. ಸಾವಿಗೆ ಯಾರೇನು ಮಾಡುವುದು? ಈಗ ಎಂಥ ಸಮಯವಿದೆಯೆಂಬುದು ನಿನಗೆ ಗೊತ್ತೆ? ಸಸಿಗಳನ್ನು ಕಿತ್ತು ಹಚ್ಚುವ ಹದವಾದ ಹಂಗಾಮು. ಈ ಹಂಗಾಮು ಸಾಧಿಸಿಕೊಳ್ಳದಿದ್ದರೆ ನಾವು ವರುಷದ ಗಂಜಿಗೇ ಎರವಾಗಬೇಕಾದೀತು. ಈ ಹೊತ್ತಿಗೆ ಶಪಿಸಿದರೆ ಬರುವುದಾದರೂ ಏನು ನಮಗೆ?' ಎಂದು ಕೀಳುದನಿಯಲ್ಲಿ ಗಂಡನೆಂದನು.

ಗಂಡನ ಈ ಸ್ವಾರ್ಥಪೂರ್ಣವಾದ ವಿಚಾರದಿಂದ ಹೆಂಡತಿಗೆ ಬಹು ಕೆಡುಕೆನಿಸಿತು. ಕಣ್ತುಂಬ ನೀರು ತಂದು ತುಸು ವೇಳೆ ವಿಚಾರಮಾಡಿ ಎಂದಳು:

'ಹೌದು, ನನಗೂ ಗೊತ್ತಿದೆ. ಅವನ ದಿನ ತುಂಬಿವೆ. ಶನಿವಾರ

ದೊಳಗಾಗಿ ಮಣ್ಣು ಕೊಡುವ ವಿಧಿಯು ಮುಗಿಯಲಾರದು. ನಿನಗೆ ನಾಳೆ ಹೇಗೂ ಉಳಿದಿನವಿದೆ. ಸಸಿಗಳನ್ನು ಹಚ್ಚಬಹುದು. '

ಗಂಡನು ಅವಳ ಸೂಚನೆಯನ್ನು ಮನ್ನಿಸಿ ಎಂದನು:

' ಅಹುದು; ಆದರೆ ಅಂತ್ಯವಿಧಿಗಾಗಿ ಆಪ್ತೇಷ್ಟರಿಗೆ ಆಮಂತ್ರಣ ಕೊಟ್ಟು ಬರಲು ನಾನು ಅತ್ತಿತ್ತ ಹೋಗಬೇಕಾಗುವದಲ್ಲವೇ ? ಸುತ್ತು ಮುತ್ತಲಿನವರಿಗೆಲ್ಲ ಈ ಸುದ್ದಿಯನ್ನು ಮುಟ್ಟಿಸಿಬರಲು ೪-೫ ತಾಸಾದರೂ ಬೇಡವೇ? '

ಹೆಂಡತಿಯು ಮತ್ತೆ ವಿಚಾರಮಗ್ನಳಾಗಿ ಮಾತನಾಡಿದಳು :

' ಅಷ್ಟೇಕೆ ? ಮೂರು ತಾಸು ಸಾಕಾಗಲಿಕ್ಕಿಲ್ಲವೇ ? ಇಂದಿನ ರಾತ್ರಿಯೇ ಈ ಪೂರ್ವಭಾಗವನ್ನು ಮುಗಿಸಬಹುದು. ತಂದೆಯು ಸಾಯಂಕಾಲದೊಳಗಾಗಿ ತೀರಬಹುದು– ಅದೇಕೆ ತೀರಿಯೇ ಹೋದನೆಂದು ಹೇಳಿಬಿಟ್ಟರೂ ಸರಿ. '

ಅವಳ ಗಂಡನು ಕೆಲಹೊತ್ತು ಗೊಂದಲದಲ್ಲಿ ಬಿದ್ದಿದ್ದು, ಸೂಚನೆಯ ಅನುಕೂಲ–ಪ್ರತಿಕೂಲತೆಗಳನ್ನು ಮನಸಿನಲ್ಲಿಯೇ ತೂಗಿ ನೋಡಿದನು. ಹೋಗುವವರ ಹಾದಿ ಬೇರೆ, ಇದ್ದವರದು ಬೇರೆ ಎಂದೆಂದು ' ಹೂ ' ಆಗಲೆಂದನು ಹೊರಹೊರಟವನು ಗಡಿಬಿಡಿಯಿಂದ ತಿರುಗಿ ಬಂದು ಹೆಂಡತಿಯನ್ನು ವಿಚಾರಿಸಿದನು.

' ಈಗ ನಿನಗೇನೂ ಕೆಲಸವಿರುವದಿಲ್ಲ ಹಣ್ಣಾದ ಕೆಲವು ಸೇಬು ಗಳನ್ನು ಕೆಡವು; ೪೦–೫೦ ಉಂಡಿಗಳನ್ನು ಕಟ್ಟು. ಅಂತ್ಯವಿಧಿಯನ್ನು ನೆರವೇರಿಸಲು ಬರುವ ಅತಿಥಿಗಳಿಗಾಗಿ ಬೇಕು. ಕೆಲಸವಾದೊಡನೆ ಸಿಹಿ ಬಾಯಿ ಮಾಡಲು ಇಂಥದೊಂದು ನಡುವೆ ಆವಶ್ಯವಿದೆ. ದನದ ಮನೆಯ ಮೂಲೆಯಲ್ಲಿ ಒಣಗಿದ ಸೌದೆ ಬೇಕಾದಷ್ಟಿದೆ; ಅದನ್ನುಪಯೋಗಿಸು ಆ ದೊಡ್ಡ ಒಲೆಯನ್ನು ಹೊತ್ತಿಸು. '

ಇಷ್ಟು ಹೇಳಿ, ಅಡುಗೆಯ ಮನೆಗೆ ಬಂದು ಕಪಾಟಿನ ಬಾಗಿಲನ್ನು ತೆರೆದನು. ಎರಡು ಪೌಂಡಿನ ದೊಡ್ಡ ರೊಟ್ಟಿಯನ್ನು ತೆಗೆದು ಕೊಯ್ತ್ತು ದಿಂದ ಸಣ್ಣ ಸಣ್ಣ ಚೂರುಗಳನ್ನು ಮಾಡಿದನು. ಬೆಣ್ಣೆ ತೊಡೆದು, ಉಪ್ಪು

ಹಚ್ಚಿ, ಹೊಟ್ಟೆತುಂಬ ತಿಂದು ತೇಗಿದನು. ಚೂರು ಮಾಡುತ್ತಿರುವಾಗ ಮೇಜಿನ ಮೇಲೆಬಿದ್ದ ತುಣುಕುಗಳೆಲ್ಲವನ್ನು ವ್ಯರ್ಥಕಳೆಯಬಾರದೆಂದು ಒಟ್ಟುಗೂಡಿಸಿ ಮುಕ್ಕಿದನು. ಮೇಲೊಂದು ಲೋಟ ನೀರನ್ನು ಕುಡಿದು ಕೆಲಸಕ್ಕಾಗಿ ಹಾದಿಯನ್ನು ಹಿಡಿದನು. ಸಿಳ್ಳನ್ನು ಹಾಕಿ ನಾಯಿಯನ್ನು ಕರೆದನು. ಚಿನ್ನಾಟದಿಂದ ಬಾಲವನ್ನು ಅಲ್ಲಾಡಿಸುತ್ತ, ಕುಂಯಿಗುಡುತ್ತ ಅದು ಕಟ್ಟೆದಲ್ಲಿಯೇ ನಿಂತಿತು. ಆದರೊಡನೆ ಆಟಕ್ಕೆ ನಿಲ್ಲದೆ ಮುಂದೆ ಸಾಗಿಯೇ ಬಿಟ್ಟನು. ಕಾಣುವವರೆಗೆ ಮನೆಯ ಕಡೆಗಿರುವ ದೃಷ್ಟಿಯನ್ನು ಅವನು ಬದಲಾಯಿಸಿರಲಿಲ್ಲೆಂದು ಆತನ ನಡಿಗೆಯಿಂದ ಹೇಳಬಹುದಾಗಿದ್ದಿತು.

ಆ ಹೆಣ್ಣುಮಗಳು ಕೆಲಸಕ್ಕೆ ಮೊದಲು ಮಾಡಿದಳು. ಮುಚ್ಚಿಟ್ಟಿದ್ದ ಹಿಟ್ಟಿನ ಬುಟ್ಟಿಯನ್ನು ಹೊರತಂದು ದೊಡ್ಡದೊಂದು ಪರಾತದಲ್ಲಿ ಹಿಟ್ಟನ್ನು ಸುರುವಿಕೊಂಡಳು. ನೀರು ಹಾಕಿ ಕಲಿಸಿದಳು. ಹದವಾಗುವ ವರೆಗೆ ನಾದಿಯೇ ನಾದಿದಳು. ಆಮೇಲೆ ಕಾಲುಚಂಡಿನಂಥ ದೊಡ್ಡ ಮುದ್ದೆಯನ್ನೊಂದು ಮಾಡಿ ಮೇಜಿನ ಒಂದು ತುದಿಗಿರಿಸಿ, ಹಣ್ಣುಗಳನ್ನು ತರಲು ಗಿಡಗಳ ಕಡೆಗೆ ಹೊರಟಳು. ಕೋಲಿನಿಂದ ಹಣ್ಣುಗಳನ್ನು ಕೆಡವುವುದನ್ನು ಬಿಟ್ಟು, ಸ್ಟೂಲಿನ ಸಹಾಯದಿಂದ ಗಿಡವನ್ನು ಮೆಲ್ಲನೇರಿದಳು. ಜಾಗರೂಕತೆಯಿಂದ ಹಣ್ಣಾದವುಗಳನ್ನಷ್ಟೇ ಆಯ್ದುಕೊಂಡು ಹೆಣಿಕೆಯ ಚೀಲದಲ್ಲಿ ತುಂಬಿದಳು.

ದಾರಿಯ ಆ ಬದಿಯಿಂದ ಅದಾರೋ ತನ್ನನ್ನು ಕೂಗಿದರೆಂದು ಅವಳು ಆ ಕಡೆಗೆ ಮುಖವನ್ನು ತಿರುಗಿಸಿದಳು. ತನ್ನ ನೆರೆಹೊರೆಯವನೂ, ಗ್ರಾಮದ ಮುಖ್ಯಾಧಿಕಾರಿಯೂ ಆದ ಪ್ಯಾವೆಟ್‌ನನ್ನು ಕಂಡಳು. ಆತನೂ ಹಂಗಾಮಿಗನುಸರಿಸಿ ತನ್ನ ಹೊಲಗಳಿಗೆ ಗೊಬ್ಬರ ಕಾಣಿಸಬೇಕೆಂದು ಉದ್ದಿಗೆಯ ಒಂದು ಬದಿಗೆ ಕಾಲುಚಾಚಿ ಕುಳಿತುಕೊಂಡು ಬಂಡಿಯನ್ನು ಹೊಡೆಯುತ್ತ ಸಾಗಿದ್ದನು.

'ಹೊಲದ ಕಡೆಗೆ ಹೊರಟಿದ್ದೀರಾ?'

'ಹೌದು, ನಿನ್ನ ತಂದೆಗೆ ಹೇಗಿದೆ?'

'ಈಗಾಗಲೇ ಅವನು ಸತ್ತಂತೆ. ಅಂತ್ಯಸಂಸ್ಕಾರವು ಶನಿವಾರ ಏಳು ಗಂಟೆಗೆ ಗೊತ್ತಾಗಿದೆ' ಎಂದು ಗಟ್ಟಿಯಾಗಿ ಅವನಿಗೆ ಕೇಳಿಸುವಂತೆ ಹೇಳಿದಳು.

'ನಡೆಯಲಿ. ಇನ್ನೇನು ಮಾಡುವುದು. ನಿಮ್ಮನ್ನಾದರೂ ದೇವರು ರಕ್ಷಿಸಲಿ' ಎಂದು 'ಹೆಲೇ'ಯೆನ್ನುತ್ತ ಬಂಡಿಯನ್ನು ಗ್ರಾಮಾಧಿಕಾರಿಯು ಮುಂದಕ್ಕೆ ಸಾಗಿಸಿದನು.

'ಆಗಲಿ. ನಿಮ್ಮನ್ನೂ ದೇವರು ಕಾಯಲಿ' ಎಂದು ಅವಳು ಮರು ಮಾತನಾಡಿದಳು.

ಆ ಮೇಲೆ ಹಣ್ಣಿನ ಚೀಲವನ್ನು ಹೊತ್ತುಕೊಂಡು ಮನೆಯೊಳಕ್ಕೆ ಬಂದಳು ಕರುಳು ಬಲು ಕೆಟ್ಟುದು ನೋಡಿ– ಅವಳಿಗೆ ತಂದೆಯದೇ ಧ್ಯಾನ. ಅವನಿದ್ದಲ್ಲಿಗೆ ಹೋಗುವದಕ್ಕೆ ಬಂದಳು. ದೂರಿಂದಲೇ ಆ ಸಪ್ಪಳವು ಕಿವಿಗೆ ಬಿದ್ದಿತು. ಅಲ್ಲಿಂದಲೇ ತಿರುಗಿಬಿಟ್ಟಳು–ಇನ್ನೂ ಬದುಕಿದ್ದಾನೆಯೆಂದಂದುಕೊಂಡು ಉಂಡಿ ಕಟ್ಟುವ ಕೆಲಸಕ್ಕೆ ತೊಡಗಿಬಿಟ್ಟಳು.

ಹಿಟ್ಟಿನ ಉಳ್ಳಿಯಲ್ಲಿ ಹಣ್ಣನ್ನು ಹಾಕಿ ಮೇಜಿನ ಇನ್ನೊಂದು ಬದಿಗಿರಿಸಿದಳು. ಹನ್ನೆರಡು ಹಣ್ಣುಗಳ ನಾಲ್ಕು ಸಾಲು ಮಾಡಿ ನೀಟಾಗಿರಿಸಿ ರಾತ್ರಿಯ ಅಡಿಗೆಗಾಗಿ ತೆರಳಿದಳು. ಕಬ್ಬಿಣ ಪಾತ್ರೆಯಲ್ಲಿ ಬಟಾಟೆಗಳನ್ನು ಹಾಕಿ ಒಲೆಯ ಮೇಲೆ ಕುದಿಯಲಿಕ್ಕಿಟ್ಟಳು. ನಾಡದಿನ ವ್ಯವಸ್ಥೆಗಾಗಿ ಅವಳು ವಿಚಾರಮಾಡುತ್ತ ಕುಳಿತಿರುವಷ್ಟರಲ್ಲಿ ಗಂಡನು ಮನೆಗೆ ಬಂದನು. ಹೊಸ್ತಿಲದಲ್ಲಿ ಕಾಲಿಟ್ಟವನೇ 'ಸತ್ತಿರುವನೇ' ಎಂದು ದುಡುಕಿನಿಂದ ಹೆಂಡತಿಯನ್ನು ಕೇಳಿದನು.

'ಇಲ್ಲ; ಇನ್ನೂ ಇಲ್ಲ. ನಮ್ಮಪ್ಪನ ಜೀವವು ಟುಕುಟುಕು ಅಂದರೂ ನಾಲ್ಕು ಗಳಿಗೆ ಹೆಚ್ಚು ಬಾಳುವ ಹಾಗಿದೆ' ಎಂದಳು.

ಇಬ್ಬರೂ ಕೂಡಿಯೇ ಮುದುಕನನ್ನು ನೋಡಲು ಮತ್ತೆ ಹೋದರು. ಆದರೆ ಮೊದಲಿನ ಸ್ಥಿತಿಯಲ್ಲಿ ಏನೂ ಬದಲಾವಣೆಯಾಗಿರಲಿಲ್ಲ. ಕ್ಷಣಸೂತ್ರವು ಹೊಯ್ದಾಡುತ್ತಿರುವಂತೆ ಉಸಿರಾಡುವದು ಎಡೆಬಿಡದೆ ನಡೆದಿತ್ತು. ಸೂರ್ಯ–ಚಂದ್ರರು ಸಮನಾಗಿ ಸಾಗಿದ್ದರು.

ಚಿಕೋಟನು ಮಾವನನ್ನು ನೋಡಿ 'ದೊಡ್ಡದಾಗುವ ದೀಪದಂತೆ ಕಡೆ ಯುಸಿರು ಫಕ್ಕನೆ ಹೊರಬೀಳುವದೆಂದೋ-ಏನೋ' ಎಂದು ನಿಟ್ಟುಸಿರಿಟ್ಟನು.

ರಾತ್ರಿ ಹೆಚ್ಚಾದ್ದರಿಂದ ಇಬ್ಬರೂ ಊಟಕ್ಕೆ ಕುಳಿತರು. ಸಿಟ್ಟೆಂದು ಒಬ್ಬರೂ ಮಾತಾಡಲಿಲ್ಲ. ಬೆಣ್ಣೆ-ಬಕ್ಕರಿಯಿಂದ ಊಟವನ್ನು ತೀರಿಸಿದರು. ಪಾತ್ರೆಗಳನ್ನು ಗಲಬರಿಸಿ ಗೊತ್ತು ಮಾಡಿದ ಸ್ಥಳದಲ್ಲಿರಿಸಿದರು. ಮನಸ್ಸಿನ ಶಾಂತತೆ ಕದಡಿದ್ದರಿಂದ ಮಲಗುವ ಮೊದಲು ಮಗುದೊಮ್ಮೆ ಮುದುಕನನ್ನು ನೋಡಲೇಬೇಕೆಂದು ಕೋಣೆಯ ಕಡೆಗೆ ಸಾವಕಾಶವಾಗಿ ಅವರಿಬ್ಬರೂ ಸಾಗಿದರು.

ಫೆಮಿಯು ಹೊಗೆಯನ್ನು ಕಾರುತ್ತಿರುವ ಚಿಮಣಿಯೊಂದನ್ನು ತಂದೆಯ ಮುಖದ ಮುಂದೆ ನಿಚ್ಚಳವಾಗಿ ಕಾಣಿಸಲೆಂದು ಹಿಡಿದಳು. ಟುಕು ಟುಕುವೆನ್ನುವ ಜೀವದುಸಿರೊಂದನ್ನು ಗುರುತಿಸದೆ ಹೋದರೆ ಸತ್ತವನೆಂದೇ ಭಾವಿಸಲು ಯಾವ ಸಂಶಯವೂ ಬರುವಂತಿರಲಿಲ್ಲ.

ಅದೇ ಕೋಣೆಯ ಮತ್ತೊಂದು ಮೂಲೆಗೆ ಚಿಕೋಟನ ಹಾಸಿಗೆ ಹಾಸಿತ್ತು. ಏನೂ ಮಾತಾಡದೆ ಗಪ್ಪುಚಿಪ್ಪಾಗಿ, ದೀಪವಾರಿಸಿ ತೆಪ್ಪಗೆ ಮಲಗಿಕೊಂಡರು. ಕೂಡಲೇ ಗಂಡಹೆಂಡರಿಬ್ಬರ ಘೋರಗುಡುವ ಹೆಚ್ಚಿನ ಸಪ್ಪಳದಲ್ಲಿ ಮೆತ್ತಗೆ ಕೇಳಬರುವ ಮುದುಕನ ಸಪ್ಪಳವು ಎಲ್ಲಿಯೋ ಅಡಗಿ ಮಾಯವಾಗಿತ್ತು. ಇಲಿಗಳ ಕಿರುಚಾಟವೂ ಮಿತಿಮೀರಿ ಸಾಗಿಯೇ ಇತ್ತು.

* * * *

ಒಂದೇ ನಿದ್ದೆಯಲ್ಲಿ ಚುಮುಚುಮು ನಸುಕಾಯಿತು. ಗಂಡನು ಎದ್ದನು. ಮಾವನ ಹರಣವು ಹಾಗೆಯೇ ಸ್ತಬ್ಧವಾದುದನ್ನು ತಿಳಿದು ಕೊಂಡು, ಮರಣದ ಜೀನತನಕ್ಕೆ ಬೇಸರಗೊಂಡು, ಹೆಂಡತಿಯನ್ನು ಅಲುಗಾಡಿಸಿ ಎಚ್ಚರಿಸಿದನು.

'ಫೆಮಿ, ಇನ್ನೂ ತುಂಬಿ ಬಂದಿಲ್ಲ-ನಿಮ್ಮಪ್ಪನದು. ಏನು ಹೀಗಾದರೆ-ನಿನ್ನೆ ನಾವಾರಿಗೂ ಹೇಳಿಬರಬಾರದಾಗಿತ್ತು' ಎಂದು ಮೂದಲಿಸುವ ದನಿಯಿಂದ ಕೇಳಿದನು.

‘ ಇಂದಂತೂ ಪಾರಾಗುವುದು ಎಲ್ಲಿಯ ಮಾತೋ. ಹೆದರುವ ಕಾರಣವಿಲ್ಲ. ನಾಳೆ ಅಂತ್ಯವಿಧಿಯಾದರೂ ಗ್ರಾಮಾಧಿಕಾರಿಯು ನಮಗೆ ತೊಂದರೆಪಡಿಸಲಾರನು. ಆ ರೆನಾಲ್ಡ ಮುದುಕನು ತೀರಿದಾಗ ಈಗಿನಂತೆ ನಟಿಯ ಹಂಗಾಮಿದ್ದರೂ ಅವನೇ ಅಪ್ಪಣೆ ಕೊಟ್ಟಿದ್ದನು ’ ಎಂದು ಶಾಂತರೀತಿಯಿಂದ ಗುಣಗುಟ್ಟಿದಳು.

ಇದನ್ನು ಕೇಳಿ ಕಾಯುದೆಯ ಕಾಟವಿಲ್ಲೆಂದು– ‘ ಆಗಲಿ ’ ಎಂದು ಅವನು ಹೊಲಕ್ಕೆ ಹೊರಟುಹೋದನು. ಫೆಮಿಯು ಮನೆಗೆಲಸಗಳನ್ನು ತೀರಿಸಿ, ಇನ್ನುಳಿದ ಬೇರೆ ಚೂರುಚಾರು ಕೆಲಸಗಳನ್ನೂ ಮಾಡಿದಳು. ಸೂರ್ಯನು ನಡುನೆತ್ತಿಯವರೆಗೇರಿದರೂ ಯಮನ ಕಟಾಕ್ಷ ಬೀಳಲಿಲ್ಲ. ಕೆಲಸಕ್ಕೆ ಬಂದ ಕೂಲಿಗಳೆಲ್ಲರೂ ಸಾಯಲಾರದ ಮುದುಕನನ್ನು ಕಾಣುವ ಕುತೂಹಲದಿಂದ ಯಜಮಾನರ ಅಪ್ಪಣೆ ಪಡೆದುಕೊಂಡು ಒಳಬಂದರು. ಉಳಿದಿರುವದಾದರೂ ಏನು ?–ಪಾಪ, ಇಂದಿಲ್ಲ ನಾಳೆಯಾದರೂ ಹೋಗು ವವನೇ ಎಂದುಕೊಳ್ಳುತ್ತ ಕಡೆಯ ದರ್ಶನಲಾಭ ಪಡೆದು, ಕೂಲೀ ಆಳುಗಳೂ ತಿರುಗಿದರು. ಹೊಲದ ಹೋರೆಯನ್ನು ಮುಗಿಯಿಸಿ ದೀಪ ಹಚ್ಚುವ ಹೊತ್ತಿಗೆ ಚಿಕೋಟನು ಹೆಂಡತಿಯೊಂದಿಗೆ ಮನೆಯನ್ನು ಸೇರಿದನು.

‘ ಈಗಾದರೂ ಮಾಡುವದೇನು ಹೇಳು, ಫೆಮಿ ’ ಎಂದು ಕಕ್ಕಾ ವಿಕ್ಕಿಯಾಗಿ ಗಂಡನು ವಿಚಾರಿಸಿದನು.

‘ ಅಸಾಧ್ಯವಾದ ಮಾತಿಗೆ ಯಾರೂ ಏನೂ ಮಾಡಲಾರರು ’ ಎಂದು ಎನ್ನುತ್ತ ಇಬ್ಬರೂ ಗ್ರಾಮಾಧಿಕಾರಿಯ ಮನೆಗೆ ಸಾಗಿದರು. ವಸ್ತು ಸ್ಥಿತಿಯನ್ನು ನಿವೇದಿಸಿಕೊಂಡರು ನಿಶ್ಚಯವಾಗಿಯೇ ಅವನಿಷ್ಟು ತಡೆಯ ಲಾರನೆಂದು ಅವನಿಂದ ಅಪ್ಪಣೆ ಪಡೆದುಕೊಂಡಿದ್ದರು. ದಯವಿಟ್ಟು ಆಚೆಯ ನಾಡದು ಕೆಲಸವನ್ನು ತೀರಿಸಲು ಅಪ್ಪಣೆಕೊಡಬೇಕೆಂದು ಗ್ರಾಮಾಧಿಕಾರಿಗೆ ದೈನಾಸಬಟ್ಟು ಬೇಡಿಕೊಂಡರು. ಪರೋಪಕಾರಿ ಯಾದ ಗ್ರಾಮಾಧಿಕಾರಿಯು ಅವರ ಮಾತಿಗೊಪ್ಪಿ ಹಾಗೆಯೇ ಆಗಲೆಂದು ಅಪ್ಪಣೆಯನ್ನಿತ್ತನು. ಮನಸ್ಸಿನ ದುಗುಡವು ಕಳೆದು–ಭಾರವು ಕಡಿಮೆ

ಯಾಗಿ ಇಬ್ಬರೂ ಮನೆಗೆ ಬಂದರು. ಹಗುರಾದ ಮನಸ್ಸಾದ್ದರಿಂದ ಅಂದಿನ ರಾತ್ರಿ ಗಾಢವಾದ ನಿದ್ರೆ ಮಾಡಿದರು. ಬೆಳಗಾಗುತ್ತಲೇ ನೋಡು ತ್ತಾರೆ ' ಯಥಾ ಪೂರ್ವಮಕಲ್ಪಯತ್ ' ಎಂದು.

* * * *

ಚಿಕೋಟ–ಫೆಮಿಯರಿಬ್ಬರೂ ಗೊಂದಲಗೆಟ್ಟರು. ತಲೆಯ ಕಡೆ ಗೊಬ್ಬರು, ಕಾಲ್ದೆಸೆಗೊಬ್ಬರು ನಿಂತು ವಿಸ್ಮಯದೃಷ್ಟಿಯಿಂದ ಮುದುಕ ನನ್ನು ನೋಡಿಯೇ ನೋಡಿದರು ಮುದುಕನು ತನ್ನನ್ನು ಮೋಸ ಗೊಳಿಸಬೇಕೆಂದು ಹಂಚಿಕೆಹಾಕಿ ಈ ರೋಗನಿಂದ ಮಲಗಿರಬೇಕೆಂದು ಅವರು ಕಲ್ಪಿಸಿದರು ಏನೇ ಇದ್ದರೂ ಈ ಸ್ಥಿತಿಯಿಂದ ಪಾರಾಗಲಾರ, ಕೈಬಿಟ್ಟು ಹೋಗುವವನೇ ! ಎಂಬ ಕನಿಕರವು ಅವರ ಹೃದಯವನ್ನು ಕರಗಿಸದೆ ಬಿಟ್ಟಿರಲಾರದು.

' ಮುಂದೆ ಏನು ಮಾಡೋಣ, ಫೆಮಿ ' ಚಿಕೋಟನು ಸೊಟ್ಟ ಮೋರೆಯಿಂದ ಕೇಳಿದನು.

ಮನೋವೇದನೆಯನ್ನು ಹತ್ತಿಕ್ಕಿ ಹೆಂಡತಿಯೆಂದಳು : ' ಬಲು ಕಷ್ಟಕ್ಕೀಡಾಗಬೇಕಾಯಿತು. ಉಪಾಯವೇ ಇಲ್ಲ. '

' ಆಮಂತ್ರಿತರಾದ ಅತಿಥಿಗಳು ತಪ್ಪದೆ ಸರಿಯಾಗಿ ವೇಳೆಗೆ ಬರ ತಕ್ಕವರು. ಅವರಿಗೆ ಹೀಗಾದುದನ್ನು ಹೇಳುವದು ಬಲು ಬಿರಿಯಾದ ಕೆಲಸ ಆಯ್ತು–ಬರಲಿ–ಬಂದಮೇಲೆ ಎಲ್ಲರಿಗೂ ಕೈಮುಗಿದು ಬಿನ್ನವಿಸಿ ಕೊಂಡರಾಯಿತು ' ಎಂದು ಗಂಡಹೆಂಡರಿಬ್ಬರೂ ಗೊತ್ತುಮಾಡಿಕೊಂಡರು.

ಏಳಕ್ಕೆ ಹತ್ತು ನಿಮಿಷವಿತ್ತು. ಜನರು ಉದ್ದವಾದ ಕರಿಯಂಗಿ ಗಳನ್ನು ಧರಿಸಿಕೊಂಡು ಬರಲಾರಂಭಿಸಿದರು. ವೇಷದಿಂದಲೇ ದುಃಖದ ಆವರಣವೂ ಮನಸಿನ ಮೇಲೆ ಮೂಡಿದ್ದಿತೋ ಏನೋ ಯಾರು ಬಲ್ಲರು !

ಅತಿಥಿಗಳು ಬಂದಬಂದಂತೆ ದುಃಖವನ್ನೂ, ವ್ಯಸನವನ್ನೂ ಮನಸ್ಸಿ ನಲ್ಲಿ ಹತ್ತಿಕ್ಕಿಕೊಂಡು ಅವರನ್ನು ಸ್ವಾಗತಿಸಿ ಬರಮಾಡಿಕೊಂಡರು. ಭಯಭೀತಿಯಿಂದ ಕೈಕಾಲುಗೆಟ್ಟವರಷ್ಟು ತೋರುತ್ತಿದ್ದರು. ತಮ್ಮ

ಭವಿಷ್ಯವು ಹೀಗೆ ಸುಳ್ಳಾಯಿತೆಂದು ಕನಸು–ಮನಸಿನಲ್ಲಿಯೂ ಕಲ್ಪಿಸಿರಲಿಲ್ಲೆಂದು ಹೇಳಹತ್ತಿದರು. ಫೆಮಿಯ ಕಣ್ಣುಗಳಲ್ಲಿ ನೀರು ದಳದಳನೆ ಉದುರುತ್ತಿದ್ದವು. ಎಲ್ಲ ಕಥೆಯನ್ನು ವಿವರಿಸಿ ತೋಡಿಕೊಂಡರು. ಪ್ರತಿಯೊಬ್ಬರಿಗೂ ಬೇಡಿಕೊಂಡರು. ವಸ್ತುಸ್ಥಿತಿಯನ್ನು ಚಾಚೂ ತಪ್ಪದೆ ಹೇಳಿದ್ದರಿಂದ ಅತಿಥಿಗಳಿಗಾರಿಗೂ ಅನ್ಯಥಾ ಭಾವಿಸಲು ಆಸ್ಪದವು ಸಿಕ್ಕದೆ ಹೋಯಿತು. ಇಂಥ ಉದಾಹರಣೆಯೊಂದು ಸಂಭವಿಸಿತೆಂದು ಎಲ್ಲರೂ ಮೂಗಿನ ಮೇಲೆ ಬೆರಳಿಟ್ಟುಕೊಂಡರು.

'ಟುಕುಟುಕುವೆನ್ನುತ್ತಿದ್ದ ಜೀವವು ಈ ಹೊತ್ತಿನವರೆಗೂ ಬದುಕಿರುವದೆಂದರೆ ತೀರ ಅತ್ಯಾಶ್ಚರ್ಯಕರವಾದ ಸಂಗತಿ' ಎಂದು ಎಲ್ಲರ ಬಾಯಿಂದ ಉದ್ಗಾರವು ಹೊರಟಿತು.

ತಾವೊಂದು ವಿಧಿಯನ್ನು ನೆರವೇರಿಸಲು ಬಂದಿರುವ ಉದ್ದೇಶವು ನಿರರ್ಥಕವಾಯಿತೆಂಬ ಅಸಮಾಧಾನವು ಅತಿಥಿಗಳಿಗೆ ಕೊರೆಯುಹತ್ತಿತು. ತಾವಿಂಥ ಹೊತ್ತಿಗಾದುದು ನಾಚಿಕೆಗೇಡುತನವೆಂದೂ ಆಡಿಕೊಂಡರು. ಇನ್ನೇತಕ್ಕಿಲ್ಲಿರುವದು–ಹೊರಟು ಹೋಗೋಣವೆಂದು ಕೆಲವರು ಸಿಟ್ಟಿನ ದನಿಯಲ್ಲಿ ಒಬ್ಬರಿಗೊಬ್ಬರು ಮಾತನಾಡತೊಡಗಿದರು. ಇಷ್ಟೆಲ್ಲ ಅನರ್ಥಕ್ಕೆ ತಾವೇ ಕಾರಣವೆಂದು ಹೇಳಿಕೊಂಡು ತೀರ ನಿಸ್ಸಹಾಯಕರಾದವರ ಭಾವದಿಂದ ಗಂಡಹೆಂಡರಿಬ್ಬರೂ ಕೈಮುಗಿದು :—

'ಆದುದಾಯ್ತು. ಕಾಲಕ್ಕೆ ಯಾರೇನು ಮಾಡುವದು? ನಾವೆಲ್ಲರೂ ಅಸಮರ್ಥರೇ ಅಲ್ಲವೆ?—ಮುಂದಾಗುವದು ತಿಳಿಯುವ ಬಗೆ ಮಾನವನಿಗೆ ಸಾಧ್ಯವೇ? ಆ ವಿಧಿಗೆಂದೇ ನಾವು ಸೇಬು ಹಣ್ಣಿನ ಉಂಡಿಗಳನ್ನು ತಯಾರಿಸಿದ್ದೇವೆ. ಅವುಗಳನ್ನು ತಾವು ಸ್ವೀಕರಿಸಬೇಕು' ಎಂದು ಹಸನ್ಮುಖದಿಂದ ಬೇಡಿಕೊಂಡರು.

ಈ ಶಬ್ದವು ಕಿವಿಗೆ ಬಿದ್ದೊಡನೆ ಅತಿಥಿಗಳ ಮುಖಗಳು ವಿಕಸಿತವಾದುವು. ಬಂದ ತಪ್ಪಿಗೆ ದಂಡವು ಲಾಭದಾಯಕವಾಯಿತೆಂದು ಮೊದಲು ಬಂದವರು, ತಡಮಾಡಿ ಬಂದವರು–ಎಲ್ಲರೂ ಉಂಡಿಯ ನಿರೀಕ್ಷಣದಲ್ಲಿಯೇ ಮಗ್ನರಾದಂತೆ ಕಾಣುತ್ತಿದ್ದರು. ಹೆಂಗಸರು ಮಾತ್ರ

ಮುದುಕನ ಹತ್ತಿರಕ್ಕೆ ಹೋಗಿ ಕಣ್ಣು ಅರಳಿಸಿ ನೋಡಿದರು. ಕೈಯಿಂದ ಸಿಲುಬೆಯ ಚಿನ್ಹವನ್ನು ಮಾಡಿ ಕೊನೆಯ ಪ್ರಾರ್ಥನೆಯನ್ನು ಹೇಳಿ ಹೊರಟು ಹೋದರು. ಗಂಡಸರು ಹೊರಗೆ ನಿಂತುಕೊಂಡೇ ಕಿಡಿಕಿಯ ಅರಿವಿಯನ್ನು ಸರಿಸಿ ಇಣಿಕಿ ನೋಡಿದರು. ಚಿಕೋಟನ ಅರ್ಧಾಂಗಿಯು ಸಾಯುದ ತಂದೆಯ ಕಥೆಯನ್ನು ಉದ್ವೇಗ–ಆಶ್ಚರ್ಯ ದಿಂದ ಒಂದೇಸವನೆ ಹೇಳುತ್ತ ನಿಂತಿದ್ದಳು.

ಅಲ್ಲಿ ಬಂದ ಮಹನೀಯರೆಲ್ಲರೂ ಈ ದೃಶ್ಯವನ್ನು ಕಣ್ಣಾರೆ ಕಂಡ ಮೇಲೆ ತಮ್ಮ ತಮ್ಮ ವಿಚಾರಲಹರಿಗಳನ್ನು ಬದಲಾಯಿಸಿಕೊಂಡರು.

* * * *

ಇಷ್ಟು ಜನಸಮುದಾಯಕ್ಕೆ ಸಂಕೋಚವಿಲ್ಲದೆ ಅಡುಗೆಯ ಮನೆಯು ಸಾಲದೆಂದು ಮೇಜುಗಳನ್ನು ಅಂಗಳದಲ್ಲಿ ಸಾಲಾಗಿ ಹಾಕಿದರು. ಎರಡು ದೊಡ್ಡ ಪರಾತಗಳಲ್ಲಿ ನಾಲ್ಕು ಡಝನ್ ಉಂಡಿಗಳನ್ನು ತಂದಿಡಲಾಗಿತ್ತು. ಎಲ್ಲರ ಬಾಯಲ್ಲಿ ನೀರು ಒಡೆದಿತ್ತು. ಇನ್ನು ಸುಮ್ಮನೆ ತಡಮಾಡುವದು ಅಯೋಗ್ಯವೆಂದು ಒಬ್ಬೊಬ್ಬರೊಂದೊಂದು ಉಂಡಿಯನ್ನು ಕೈಚಾಚಿ ತೆಗೆದುಕೊಂಡರು. ಪರಾತದಲ್ಲಿ ನಾಲ್ಕು ಮಿಕ್ಕಿದವು. ತುಂಬಿದ ಬಾಯಿಂದ ಚಿಕೋಟನು ಅಸ್ಪಷ್ಟ ವಿಚಾರದಿಂದ ‘ ಆಕೆಯ ತಂದೆಯು ಇವುಗಳನ್ನು ನೋಡಿದ್ದರೆ ಪ್ರಾಣ ಕಳೆದುಕೊಳ್ಳುತ್ತಿದ್ದನು. ಅವನು ಈ ಉಂಡಿಗಳ ಮೇಲೆ ಬಲು ಜೀವ ’ ಎಂದು ಎಲ್ಲರಿಗೂ ಕೇಳುವ ದನಿಯಲ್ಲಿ ಕೂಗಿದನು.

‘ ಇರಬಹುದು. ಈಗೇನು ಅವನು ಬರುವಹಾಗಿಲ್ಲವಲ್ಲ ! ಅವನು ಜೀವಿಸಿರುವಾಗಲೆ ಅವನ ಜೀವಪ್ರಸಾದವು ಪ್ರತಿಯೊಬ್ಬರಿಗೂ ಮುಟ್ಟಿರುವದಲ್ಲವೆ ? ’ ಎಂದು ಅವರಲ್ಲೊಬ್ಬನೆಂದನು.

ಎಲ್ಲರೂ ಈ ವಾಕ್ಯವನ್ನು ಕೇಳಿ ತಣ್ಣಗಾದರು. ಅವರವರ ಭಾಗ ಅವರವರಿಗೆ ಎಂದಂದುಕೊಂಡು ಉಂಡಿಯನ್ನು ನುಂಗಹತ್ತಿದರು.

ಚಿಕೋಟನ ಹೆಂಡತಿಯು ವ್ಯರ್ಥ ಖರ್ಚಿಗಾಗಿ ಬಲು ಮಿಡುಕಿದಳು. ಪ್ರಸಂಗಕ್ಕೆ ಹಿಂಜರಿಯುವದುಚಿತವಲ್ಲೆಂದು ಧೈರ್ಯವನು

ತಂದುಕೊಂಡಳು. ಬಾಟಲಿಗಳ ಮೇಲೆ ಬಾಟಲಿ ತೆರವಾದುವು. ಪೇಲೆಗಳು ತುಂಬಿದವೆನ್ನುವಷ್ಟರಲ್ಲಿ ಬರಿದಾಗುತ್ತಿದ್ದವು. ಆರು ತಿಂಗಳಿನ ಗಂಜಿಯು ನಿಮಿಷಮಾತ್ರದಲ್ಲಿ ಚಟ್ಟನೆ ಹಾರಿಹೋಯಿತು. ಜನರ ಉತ್ಸಾಹಿತ ಮುಖಗಳು ನಗಲಾರಂಭಿಸಿದವು. ಸಂತೃಪ್ತರಾದವರಂತೆ ದೇಹಸ್ಮೃತಿಯನ್ನು ಮರೆತರು. ಮಾತಿನಮಳೆಯನ್ನು ವಿಲಾಸಮಂದಿರದ ಸದಸ್ಯರಂತೆ ಸುರಿಸಿದರು. ಬಂದವರೆಲ್ಲರೂ ಚಿಕೋಟಿ- ಫೆಮಿಯರಿಬ್ಬರನ್ನೂ ಆತಿಥಿಸೇವೆಗಾಗಿ ಮನವಾರೆ ಕೊಂಡಾಡಿದರು.

ಇತ್ತ ಇದೆಲ್ಲ ತಮಾಷೆ ನಡೆದಾಗ, ಮುದುಕನ ಕಾಲುದೆಸೆಯಲ್ಲಿ ಹಣ್ಣಾದ ಮುದುಕಿಯೊಬ್ಬಳು ವಿಷಣ್ಣಭಾವದಿಂದ ಮುದುಕನನ್ನು ಏಕದೃಷ್ಟಿಯಿಂದ ನೋಡುತ್ತ ನಿಂತಿದ್ದಳು ‘ ಇವನಂತೆಯೇ ತನ್ನ ಹಣೆಯ ಬರಹವು ಬೇಗನೆ ಒದಗಬಹುದೆಂಬ ಯೋಚನೆಯಲ್ಲಿ ಆವಳು ಮೈಮರೆತು ಬಿಟ್ಟಿದ್ದಳು. ಫಕ್ಕನೆ ಎಚ್ಚತ್ತವಳಾಗಿ ಬಿರಿಬಿರಿ ಕಣ್ಣು ಬಿಡುತ್ತ ಮುದುಕನನ್ನು ಮುಟ್ಟಿಯೇ ನೋಡಿದಳು. ಆ ಕ್ಷಣದವರೆಗೆ ತಡೆದಿದ್ದ ಹರಣವು ಹಾರಿಹೋದುದನ್ನು ಕಂಡು ಕಿಡಿಕಿಯೊಳಗೆ ಮುಖವನ್ನು ಹಾಕಿ ತೇಕುತ್ತ ‘ ಅವನು ಹೋ... ದ .. ನು.... ಹೋ.... ದ.... ನು.... ’ ಎಂದು ಭಯ ಚಕಿತಳಾಗಿ ಒಂದೇ ಸ್ವರದಲ್ಲಿ ಗಟ್ಟಿಯಾಗಿ ಚೀರಿಕೊಂಡಳು.

ಎಲ್ಲರೂ ಕಿವಿಯಾರೆ ಕೇಳಿದರು. ಎಲ್ಲವೂ ಶಾಂತವಾಯಿತು ಯಾವದೊಂದರ ಪರಿವೆಯಿಲ್ಲದೆ ಸಾಗಿರುವ ಗಲಾಟೆಯು ಅಲ್ಲಿಂದಲ್ಲೆ ಇದ್ದಹಾಗೆ ನಿಂತುಬಿಟ್ಟಿತು. ಹೆಂಗಸರು ಮಾತ್ರ ನಿಜವೇ ಎಂಬದನ್ನು ನಿರೀಕ್ಷಿಸಲು ಅತ್ತಕಡೆಗೆ ಓಡಿದರು.

ಅಹುದು, ನಿಜ. ಅವನು ಸತ್ತಿದ್ದಾನೆ. ಸಾವಿನ ಸೂಚನೆಯು ಗಂಟಲದಿಂದ ಹಾರಿತ್ತು. ಇನ್ನೂ ಬಾಯಲ್ಲಿ ಉಂಡಿಯನ್ನು ನುರಿಸಿ ತಿನ್ನುವ ಕೆಲವರು ಒಬ್ಬರನ್ನೊಬ್ಬರು ಹುಳುಹುಳು ನೋಡುತ್ತ ಕಣ್ಣು ಮುಚ್ಚಿಕೊಂಡು ನೀಚ ಮುದುಕ ಈ ಹೊತ್ತಿಗೇ ತೀರಿಕೊಂಡನೆಂದಂದುಕೊಳ್ಳಹತ್ತಿದರು.

ಗಂಡ-ಹೆಂಡರಿಬ್ಬರೂ ಒಂದೆಸವನೆ ಹರಿದು ಬರುವ ಕಂಬನಿಗಳನ್ನು

ಒರಿಸಿಕೊಂಡು ಶಾಂತರಾದರು. ಅವರು ಕೆಲಹೊತ್ತು ನಿಶ್ಚಲರಾಗಿ ನಿಂತು ಬಿಟ್ಟರು

ಆತನು ಹೆಚ್ಚು ಹೊತ್ತು ಬದುಕಲಾರನೆಂದು ನಮಗೆ ಗೊತ್ತಿತ್ತು. ನಿನ್ನೆಯೇ ಅವನು ತನ್ನ ಮನಸನ್ನು ಕೊಂದುಕೊಂಡು ಬಿಟ್ಟಿದ್ದರೆ-ಈ ಪ್ರಸಂಗವೊದಗದೆ-ಎಲ್ಲವೂ ಎಷ್ಟು ಸುಸೂತ್ರವಾಗಬಹುದಾಗಿದ್ದಿತು! ಈ ತೊಂದರೆ ಎಲ್ಲಾಗುತ್ತಿತ್ತೆಂದು ಎಲ್ಲರೂ ಕೈಮಾಡಿ ಮಾತಾಡ ಹತ್ತಿದರು.

ಆದರೇನು, ಒಮ್ಮೆ ಎಲ್ಲವೂ ಮುಗಿಯಿತು. ಅಂತ್ಯವಿಧಿಯು ಇನ್ನು ಸೋಮವಾರ. ಇಷ್ಟೆ ಮತ್ತೇನು ಹೇಳುವದು? ಇನ್ನೊಂದು ಬಾರಿ ಮಾತ್ರ ತಿನ್ನಲು ಉಂಡಿಗಳು ಬೇಕಾದುವು

ಅತಿಥಿಗಳು ತಮ್ಮ ಹಾದಿಯನ್ನು ಹಿಡಿದರು. ಅವರು ಅದೇ ಮಾತನ್ನು ತಿರುಗೂ-ಮುರುಗೂ ಆಡುತ್ತ ಹೊರಬಿದ್ದರು. ತಾವು ಯಾವುದನ್ನು ಮಾಡಬೇಕೆಂದು ಬಂದಿದ್ದರೋ ಅದನ್ನು ಕಂಡುದಕ್ಕಾಗಿ ಆನಂದಭರಿತರಾದರು. ಚಿಕೋಟನನ್ನು ಇನ್ನೂ ಒಮ್ಮೆ ಕೊಂಡಾಡುವ ಯೋಗವಿರುವದೆಂದು ನಗೆಯಾಡುತ್ತ ಅವರು ಮರೆಯಾದರು.

ಗಂಡಹೆಂಡರಿಬ್ಬರೇ ಉಳಿದ ಮೇಲೆ ಅತ್ಯಂತ ಖಿನ್ನತೆಯಿಂದ ಫೆಮಿಯು ಬಡಬಡಿಸಹತ್ತಿದಳು.

'ಮತ್ತೆ ನಾಲ್ವತ್ತೆಂಟು ಉಂಡಿಗಳನ್ನು ಕುದಿಸಬೇಕು ನಿನ್ನೆಯೇ ಅವನು ಮನಸುಮಾಡಿ ಸತ್ತಿದ್ದರೆ ಈ ....'

'ಇದೊಮ್ಮೆ ನೀನು ಮಾಡಿಬಿಟ್ಟೆಯೆಂದರೆ ತೀರಿತು. ಮಗುದೊಮ್ಮೆ ಮಾಡುವ ಹೊತ್ತು ಬರುವದೆಂದೇಕೆ ಕಲ್ಪಿಸುವಿ? ಇನ್ನೂ ಸಂಶಯವೇ? ....' ಎಂದು ಅವಳನ್ನು ಸಮಾಧಾನಪಡಿಸುವದಕ್ಕಾಗಿ ಗಂಡನು ಆಧ್ಯಾತ್ಮಿಕ ವಿಚಾರಗಳ ಮಳೆಗರೆದನು.

ಇನ್ನೂ ಏನನ್ನೋ ಹೇಳಬೇಕೆಂದಿರುವಷ್ಟರಲ್ಲಿಯೇ ಗಂಟಲ ಸಿರಗಳುಬ್ಬಿದಂತಾಗಿ ಅವನಿಗೆ ಮಾತಾಡಲು ಬಾಯಿ ಬರಲಿಲ್ಲ. ಅವನು ಮಿಕಿ ಮಿಕಿ ಹೆಂಡತಿಯ ಮುಖವನ್ನು ನೋಡುತ್ತ ನಿಂತುಬಿಟ್ಟನು.

---

# ಹುಚ್ಚಿ

ಫ್ರಾಂಕೋ–ಪ್ರಶಿಯನ್ ಯುದ್ಧದಲ್ಲಿ ಭೀತಿಪ್ರದವಾದ ಕತೆಯೊಂದು ಇನ್ನೂ ಮೊನ್ನೆಮೊನ್ನೆ ಆದಂತೆ ತನಗೆ ನೆನಪಾಗುತ್ತದೆಂದು ಮೆಸ್ಸುಅರ ಅಂಡಾಲನೆಂದನು.

ಅವನ ಮನೆ ಫಾಬರ್ಗ ಕಾಮೋಲಿನಲ್ಲಿ. ಪ್ರಶಿಯನ್ನರು ಮುತ್ತಿಗೆ ಹಾಕಿದಾಗ ಅವನು ಅಲ್ಲಿಯೇ ವಾಸಿಸುತ್ತಿದ್ದನು. ತನ್ನ ಮನೆಗೆ ಹೊಂದಿದ ನೆರೆಮನೆಯಲ್ಲಿ ಒಂದು ತರಹದ ಹುಚ್ಚು ಹಿಡಿದ ಹೆಂಗುಸೊಬ್ಬಳಿದ್ದಳು. ಒಂದರ ಮೇಲೊಂದು ಒದಗಿದ ದುರ್ದೈವದ ಆಘಾತಗಳಿಂದ ಅವಳ ತಲೆಯು ಕೆಟ್ಟುಹೋಗಿತ್ತು. ಅವಳ ೨೫ನೆಯ ವರುಷಕ್ಕೆ ತಂದೆಯು ತೀರಿದನು. ಮುಂದೊಂದು ತಿಂಗಳು ತುಂಬುವದರಲ್ಲಿಯೆ ಅವಳ ಗಂಡನೂ, ಆದೇ ಹುಟ್ಟಿದ ಹಸುಗೂಸೂ ಕೈಬಿಟ್ಟು ತೆರಳಿದ್ದವು. ಸಾವು ಒಮ್ಮೆ ಒಂದು ಮನೆಯಲ್ಲಿ ಕಾಲಿಕ್ಕಿತೆಂದರೆ ತಿರುಗೂಮುರುಗೂ ಆ ಮನೆಯನ್ನೇ ತಿಕ್ಕಿಮುಕ್ಕುತ್ತದೆ; ತನ್ನ ಆಟವನ್ನು ಬೇಕಾದ ಹಾಗೆ ಹೂಡುತ್ತದೆ.

‘ ಈ ಹೆಣ್ಣುಮಗಳು ದುಃಖಾತಿರೇಕದಿಂದ ಹಾಸಿಗೆಯನ್ನು ಹಿಡಿದು ಆರು ವಾರಗಳು ಕಳೆದಿದ್ದವು; ಮೇಲಾಗಿ ಸನ್ನಿಪಾತವೂ ಕೂಡಿಕೊಂಡಿತ್ತು. ತಂದೆ, ಗಂಡ, ಮಗುವಿನ ಹಾದಿಯನ್ನೇ ಇವಳೂ ಬೇಗನೆ ಹಿಡಿಯಬಹುದೆಂಬ ಸಂಭವವು ಹೆಚ್ಚಾಗಿದ್ದಿತು. ಅವಳಿಗೆ ಏನೂ ದಕ್ಕುತ್ತಿರಲಿಲ್ಲ. ಯಾವುದೂ ಗಂಟಲಿನಲ್ಲಿ ಇಳಿಯುತ್ತಿದ್ದಿಲ್ಲ. ಹುಳು ಹುಳು ಕಣ್ಣು ಮಾತ್ರ ಬಿಡುತ್ತ ಹಾಸಿಗೆಯಲ್ಲಿ ಬಿದ್ದಿರುತ್ತಿದ್ದಳು. ಯಾವದಾದರೊಂದು ಔಷಧ ಕೊಟ್ಟು ಗುಣಪಡಿಸುವ ಅನೇಕ ಉಪಾಯಗಳು ಅನೇಕ ಸಲ ವ್ಯರ್ಥವಾದುವು. ಸಮೀಪದಲ್ಲಿ ಯಾರಾದರೂ ಬಂದರೂ ಕೂಡ, ತನ್ನನ್ನು ಕೊಲ್ಲಬೇಕೆಂದು ಮಾಡಿರುವ ಹಂಚಿಕೆಯೆಂದು ಅವಳು ಬಗೆದು ಹೌಹಾರುವಂತೆ ಚೀರಿಕೊಳ್ಳುವಳು, ದೊಪ್ಪನೆ ಬಿದ್ದುಕೊಳ್ಳುವಳು. ಆದ್ದರಿಂದ ಅವಳನ್ನು ಹಾಸಿಗೆಯಲ್ಲಿಯೇ ಬಿಡದ ಹೊರತು ಬೇರೆ

ಹಾದಿಯುಳಿದಿರಲಿಲ್ಲ. ಬೇರೆ ಬಟ್ಟೆಗಳನ್ನು ತೊಡಿಸಿ ಮತ್ತೊಂದು ಹಾಸಿಗೆಗೆ ಅವಳನ್ನು ಸಾಗಿಸಬೇಕಾದರೆ ಕೃತಾವಸ್ಥೆಯಾಗುತ್ತಿತ್ತು !

'ಅವಳನ್ನು ನೋಡಿಕೊಳ್ಳಲು ಅವರ ಮನೆಯಲ್ಲಿಯೇ ನೌಕರಿ ಮಾಡುತ್ತ ಮುಪ್ಪಾದ ಆಳುಮಗನೊಬ್ಬನೇ ಮಾತ್ರ ಈಗಿದ್ದವನು. ಅವನು ಕಷ್ಟಪಟ್ಟು ಅವಳಿಗೆ ಮೇಲಿಂದಮೇಲೆ ಏನಾದರೂ ಕುಡಿಸು ವನು—ಹಾಲು, ಗಂಜಿ, ನೀರು. ಅವಳಿಗೇನಾಗಿತ್ತೊ, ತಲೆಯಲ್ಲಿ ಏನು ಸೇರಿಕೊಂಡಿತ್ತೋ, ಏನೂ ತಿಳಿಯಲವಕಾಶವಿರಲಿಲ್ಲ. ಅವಳೆಂದೂ ತುಟಿ ಎರಡು ಮಾಡದ್ದರಿಂದ ಯಾರಿಗೂ ಅದರ ಸುಳಿವು ಕೂಡ ಹತ್ತುವದು ಕಠಿಣವಾಗಿತ್ತು. ಸತ್ತವರಿಗಾಗಿ ಅವಳು ಈ ಪರಿಯಾಗಿರಬಹುದೇ ? ಅಥವಾ ಏನಿತ್ತು—ಏನಾಯಿತೆಂಬ ಬಾಳಿಗಾಗಿ ಹಳಹಳಿಸುತ್ತ ನೊಂದ ಬೆಂದ ಹಳವಂಡಗಳನ್ನು ಕಾಣುತ್ತಿದ್ದಳೇ ? ಸಿಂತನೀರಿನಂತೆ ಅವಳ ಮನಸು ಮಲೆತು ಹೋಗಿರಬಹುದೇ ? ಏನೋ— ದೇವರೇ ಬಲ್ಲ—ಅವಳ ಈ ಸ್ಥಿತಿಯನ್ನು.

'ಅವಳು ಹೀಗೆಯೇ ೧೫ ವರುಷಗಳ ವರೆಗೆ ಮಂಕು ಹಿಡಿದ ಸ್ಥಿತಿ ಯಲ್ಲಿಯೇ ತನ್ನಷ್ಟಕ್ಕೆ ತಾನೆ ಏಕಾಂತಲೋಕದಲ್ಲಿದ್ದು ಬಿಟ್ಟಿದ್ದಳು.

'ಯುದ್ಧದ ರಣಗೊಂಬು ದಿಗಂತವನ್ನು ವ್ಯಾಪಿಸಿ—ಎದೆಯನ್ನು ಬಿರಿಯಿಸಿತು. ಡಿಶಂಬರದ ಆರಂಭಕ್ಕೆ ಜರ್ಮನ್ನರು ಕಾರ್ಮೇಲಿಯಕ್ಕೆ ದಾಳಿಯಿಟ್ಟರು. ನಿನ್ನೆ—ಮೊನ್ನೆ ಜರುಗಿದ ಬಿಸಿ ಸುದ್ದಿಯೆಂಬಂತೆ ನನಗೀ ಗಲೂ ಎಲ್ಲವೂ ನೆನಪಿದೆ. ಮಿತಿಮೀರಿದ ಚಳಿ; ಹಿಮ ಬೀಳುತ್ತಿದ್ದುದ ರಿಂದ ಕಲ್ಲುಗಳೂ ಹೆಪ್ಪುಗಟ್ಟಿದ್ದವು. ಅವರ ದಾಳಿ ಮನೆ ಮುಂದೆಯೇ ಬಂದಿತು. ನನಗೆ ಸಂದುಬೇನೆಯಾಗಿದ್ದರಿಂದ ನನಗೆತ್ತಿತ್ತಲೂ ಅಲುಗಾ ಡಲು ಬರುತ್ತಿದ್ದಿಲ್ಲ. ಅವರ ಕಿವಿ ಬಿರಿಯುವ ಸಪ್ಪಳ ಕೇಳಿ ನಾನು ಒಂದು ಆರಾಮುಕುರ್ಚಿಯ ಮೇಲೆ ಬಿದ್ದುಕೊಂಡೇ ಕಿಡಿಕಿಯೊಳಗಿಂದ ಅವರು ದಾಟಿಹೋಗುವದನ್ನು ಕಣ್ಣೊಳಗೆ ಕಣ್ಣಿಟ್ಟುಕೊಂಡು ನೋಡುತ್ತ ಬಿದ್ದುಕೊಂಡಿದ್ದೆ. ನಿಚ್ಚಳವಾಗಿ ಎಲ್ಲವೂ ಕಾಣುತ್ತಿತ್ತು.

'ಪ್ರುಸಿಯನ್ನರ ದಂಡು—ಒಬ್ಬರ ಹಿಂದೊಬ್ಬರು ದಡದಡನೆ ಹೆಜ್ಜೆ

ಹಾಕುತ್ತ, ಜಯಧ್ವನಿಯನ್ನು ಮಾಡುತ್ತ ವೈಭವದಿಂದ ಸಾಗಿದ್ದಾರೆ. ಸಾಲಿಗೆ ಸಾಲೇ ಬರುತ್ತಿತ್ತು. ಮೇಲಧಿಕಾರಿಗಳು ಸ್ಥಳನಿವಾಸಿಗಳ ಮನೆಗಳಿಗೆ ತಮ್ಮ ಜನಗಳನ್ನು ಊಟಕ್ಕಾಗಿ ಹಂಚಿಹಂಚಿ ಅಟ್ಟಿಹಾಕಿದರು. ಆದರಲ್ಲಿ ನನ್ನ ಪಾಲಿಗೆ ೧೭ ಟೊಣಪರ ತಂಡವೊಂದು ಒಕ್ಕರಿಸಿತು. ನನ್ನ ನೆರೆಮನೆಯಾಕೆಗೆ ೧೨ ಜನರ ಗುಂಪೊಂದು ಬೀಗರಾಗಿ ಆಗಮಿಸಿತು. ಅವರಲ್ಲೊಬ್ಬನೆ ಮಾತ್ರ ಮೇಲಧಿಕಾರಿಯೆಂದು ಒಡೆದು ಕಾಣುತ್ತಿತ್ತು. ಅವನು ಒಂದೇಸವನೆ–ತೆರಪಿಲ್ಲದೆ ಮಾತಾಡಿಯೇ ಮಾತಾಡುತ್ತಿದ್ದನು ಕಟ್ಟಿಗೆಯ ಬಾಯಿಯಾಗಿದ್ದರೆ ಒಡೆದು ಹೋಗಬಹುದಾಗಿದ್ದಿತು; ನೋಡಲೂ ಕ್ರೂರನಾಗಿ ಕಾಣುತ್ತಿದ್ದನು.

'ಮೊದಮೊದಲಿನ ಕೆಲ ದಿನಗಳು ಯಾವುದಕ್ಕೂ ಕೊರತೆಯಿಲ್ಲದೆ ಸುಸೂತ್ರವಾಗಿ ಕಳೆದುವು. ತಮ್ಮ ಪ್ರಸ್ತವು ಸರಿಯಾಗಿ ನೆಲೆಯೂರಿತೆಂದು ಅವರು ನಿಶ್ಚಿಂತರಾಗಿದ್ದರು. ಆ ಮನೆಯ ಯಜಮಾನತಿಗೆ ಮೈಯಲ್ಲಿ ಚನ್ನಾಗಿಲ್ಲೆಂಬ ಸುದ್ದಿಯು ಆ ಅಧಿಕಾರಿಗೆ ಕರ್ಣೋಪಕರ್ಣವಾಗಿ ತಿಳಿದುಬಂದಿತು. ಆದಕ್ಕವನು ಅವನ್ನು ಕಿವಿಯ ಮೇಲೆ ಹಾಕಿಕೊಳ್ಳಲೇ ಇಲ್ಲ ಆದರೂ ಆ ಹೆಣ್ಣುಮಗಳಿಗೆ ಆಗಿರುವದಾದರೂ ಏನು, ಎಂಬುದನ್ನರಿತುಕೊಳ್ಳಲು ಅವನಿಗೆ ಕುತೂಹಲವುಂಟಾಯಿತು. ಯಾಕೆಂದರೆ ಇಷ್ಟು ದಿನ ಅವಳ ಮನೆಯಲ್ಲಿಯೇ ತನಗೆ–ತನ್ನ ಕೈಕೆಳಗಿನವರಿಗೆ ಅಳಿಯತನ ಸಾಗಿದರೂ ಅವಳು ಯಾರೊಬ್ಬರ ಕಣ್ಣಿಗೂ ಬೀಳದ್ದರಿಂದ ಅವನು ಇತ್ಯರ್ಥ ಮಾಡಿಕೊಳ್ಳಬೇಕೆಂದು ನಿರ್ಧರಿಸಿಕೊಂಡನು. ಅವಳಿಗಾದ ಬೇನೆ ಯಾವುದೆಂಬುದನ್ನು ಹೊರಗೆಡಹಲು ವಿಚಾರಿಸತೊಡಗಿದನು. ಎಂದಿಗೂ ಮಾಯದ ದುಃಖದಿಂದ ಅವಳು ೧೫ ವರುಷಗಳಿಂದ ಹಾಸಿಗೆ ಹಿಡಿದಿರುವಳೆಂದು ಗೊತ್ತುಹಚ್ಚಿದನು. ಆದರೂ ಅಧಿಕಾರಿಯು ಇಷ್ಟಕ್ಕೆ ನಂಬದೆ, ಮತ್ತಾವುದಾದರೊಂದು ಗೂಢವಾದ ಹಂಚಿಕೆಯಿರಬೇಕೆಂದು ಕಲ್ಪಿಸಿಕೊಂಡನು. ಪೃಸಿಯನ್ನರ ಹತ್ತಿರ ಬರಬಾರದು; ಮಾತಾಡಬಾರದು; ಅಥವಾ ಕಣ್ಣೆತ್ತಿ ನೋಡಬಾರದೆಂಬ ಹೆಮ್ಮೆಯಿಂದ ಅವಳು ಹಾಸಿಗೆಯಿಂದೇಳದೆ ಉರಿಯುತ್ತ ಬಿದ್ದಲ್ಲಿಯೇ ಬಿದ್ದಿರಬೇಕೆಂದು

ತನ್ನ ಮನಸಿನಲ್ಲಿಯೇ ಆ ಅಧಿಕಾರಿಯು ಕಲ್ಪಿಸಿ, ವಿಚಾರಗಳ ಗೊಂದಲ ದಲ್ಲಿ ಸಿಕ್ಕಿಕೊಂಡನು.

'ಅವಳು ತನ್ನನ್ನು ಬಲವಾಗಿ ಡಿಕೊಳ್ಳಬಹುದೆಂದು ಬಹು ತವಕಪಡ ಹತ್ತಿದನು. ಅವಳ ಕೋಣೆಯೊಳಹೊಕ್ಕು ಒರಟುತನದಿಂದ 'ಯಜ ಮಾನಿಯೇ, ನೀನು ಹಾಸಿಗೆ ಬಿಟ್ಟೇಳಲೇಬೇಕು; ಕೆಳಬಂದು ನಮ್ಮೆಲ್ಲ ರಿಗೂ ದರ್ಶನ ಕೊಡಬೇಕು' ಎಂದು ಅವಳಿಗೆ ಅನಿವಾರ್ಯವಾಗಿ ಮೊದಲು ಬಿನ್ನವಿಸಿಕೊಂಡನು.

'ಅವಳು ಏನೊಂದೂ ಮರುಮಾತನಾಡಲಿಲ್ಲ ಕೇಳಿಸದವರಂತೆ ಸುಮ್ಮನಿದ್ದುಬಿಟ್ಟಳು. ಅವಳ ದೊಡ್ಡ ಕಣ್ಣುಗಳ ನೋಟವು ಮಾತ್ರ ಅವನೆದೆಯಲ್ಲಿ ನಟ್ಟಿತು.

ಅಧಿಕಾರಿಯು ಇದನ್ನು ಸಹಿಸಿಕೊಂಡು ಮಾತು ಮುಂದರಿಸಿದನು:

'ಯಾರ ಸೊಕ್ಕನ್ನೂ ಸೈರಿಸುವ ಸಹನಶೀಲತೆಯು ನನಗಿರುವ ದಿಲ್ಲ; ನಿನ್ನಿಷ್ಟಕ್ಕೆ ನೀನೇಳದಿದ್ದರೆ ಮಾತ್ರ, ಯಾರ, ಯಾವ ನೆರವೂ ಇಲ್ಲದೆ ಎಬ್ಬಿಸುವಂಥ ಉಪಾಯಗಳನ್ನು ನಾನು ಉಪಯೋಗಿಸಬೇಕಾ ದೀತು'—ಎಂದು ಅಧಿಕಾರವಾಣಿಯು ಹೊರಬಿತ್ತು.

'ಆದರೇನು? ಇವನ ಉಸಿರುಗಳು ಆಕೆಯ ಕಿವಿಗೆ ತಾಕಿದವೋ ಇಲ್ಲವೊ ಎಂಬ ಸೂಚನೆಯ ಭಾವದಿಂದ ಅವಳಿದ್ದಳು. ಏನೂ ಮಿಸು ಕಾಡದೆ ಬಿದ್ದುಕೊಂಡಿದ್ದಳು.

'ಅವಳ ಮೌನವು ತನ್ನನ್ನು ತೀರ ಅಪಮಾನಗೊಳಿಸಿತೆಂದು ಅವನು ಕೆಟ್ಟ ಮೋರೆ ಮಾಡಿದನು. ರಕ್ತವು ಕುದಿಯಲಾರಂಭಿಸಿತು.

'ನಾಳೆ ನೀನು ಕೆಳಗೆ ಬರದಿದ್ದರೆ ............' ಎಂದಂದುಕೊಳ್ಳುತ್ತ ಕೋಣೆಯಿಂದ ಕಾಲಪ್ಪಳಿಸುತ್ತ ಕೆಳಗಿಳಿದನು.

'ಮರುದಿನ ಅವಳ ಆಳುಮಗನು ಅವಳ ಬಟ್ಟೆಯನ್ನು ಬದಲಾಯಿಸ ಬೇಕೆಂದು ಬಂದನು; ಆದರೆ ಅವಳು ಅವನ ಮೈಮೇಲೇರಿಹೋಗಿ ತನ್ನ ಎಲ್ಲ ಶಕ್ತಿಯಿಂದ ಅವನನ್ನು ಬಲವಾಗಿ ದೂಡಿದಳು. ಅದೇ ವೇಳೆಗೆ ಅಧಿಕಾರಿಯು ಗಡಿಬಿಡಿಯಿಂದ ಅಟ್ಟವನ್ನೇರಿ ಬಂದನು. ಅವಳನ್ನು

ಅಧಿಕಾರಿಯ ಕಾಲಮೇಲೆ ಹಾಕಿ, ಆ ಆಳುಮಗನು ' ಅಧಿಕಾರಿಯೇ, ಅವಳು ಕೆಳಗೆ ಬರಲಾರಳು. ಕ್ಷಮಿಸಬೇಕು. ಅವಳು ಏಳಲಾರದ ಸ್ಥಿತಿ ಯಲ್ಲಿದ್ದಾಳೆ ನೋಡಬಾರದೇ " ಎಂದು ಒಂದೇಸವನೆ ಬೇಡಿಕೊಂಡನು.

' ಸಿಟ್ಟಿನ ಭರದಲ್ಲಿ ಅಧಿಕಾರಿಯು ದಿಗಿಲುಗೊಂಡನು; ವಿಚಾರ ಮಾಡಮಾಡುತ್ತ ಅವಳನ್ನು ಹೊರಗೆಳೆತರಲು ತನ್ನ ಶಿಪಾಯಿಗಳಿಗೆ ಅಪ್ಪಣೆಕೊಡುವಷ್ಟು ಧೈರ್ಯವನ್ನು ಅವನು ಒಮ್ಮೆಲೆ ಮಾಡಲಿಲ್ಲ. ಸ್ವಲ್ಪ ಹೊತ್ತು ಕಳೆದ ಮೇಲೆ ಅಧಿಕಾರಿಯು ಬಿದ್ದು ಬಿದ್ದು ನಗುತ್ತ ಜರ್ಮನ್ ಭಾಷೆಯಲ್ಲಿ ಸಿಪಾಯಿಗಳಿಗೆ ಆಜ್ಞೆ ಮಾಡಿದನು

ಗಾಯಗೊಂಡ ಮನುಷ್ಯನನ್ನು ಹೊತ್ತುಕೊಂಡು ಬರುವಂತೆ ಕೆಲ ಸಿಪಾಯಿಗಳು ಕೂಡಲೆ ಅವಳ ಹಾಸಿಗೆಯನ್ನೇ ಹೊತ್ತುಕೊಂಡು ಬಂದರು. ಅಲ್ಲಿಯಾದರೂ—ಅವಳು ತೆಪ್ಪಗೆ ಬಿದ್ದಿದ್ದಳು; ಮಿಸುಕಾಡಲಿಲ್ಲ ಈಗಾದರೂ ತುಟಿ ಎರಡು ಮಾಡಲಿಲ್ಲ. ಅಲ್ಲಿ ಏನು ನಡೆದಿತ್ತೋ ಅದರ ಕಡೆಗೆ ಅವಳ ಲಕ್ಷ್ಯವೇನೂ ಇರಲಿಲ್ಲ ಅವಳ ಹಿಂದೆ ಸಿಪಾಯಿಯೊಬ್ಬನು ಅವಳ ಬಟ್ಟೆ-ಬರೆಯ ಗಂಟನ್ನೊಂದು ಹೊತ್ತುಕೊಂಡು ಸಾಗಿದ್ದನು. ಅಧಿಕಾರಿಯು ಕೈಗಳನ್ನು ತಿಕ್ಕುತ್ತ ' ನೀನೆ ನಿನ್ನ ಬಟ್ಟೆಯನ್ನು ಹಾಕಿ ಕೊಳ್ಳಲು ಎದ್ದು ಬರುವಿಯೋ ಇಲ್ಲವೋ ನೋಡೋಣ " ಎಂದನು. ಅವಳಿಂದ ಉತ್ತರ ಬಾರದ್ದರಿಂದ ಅಧಿಕಾರಿಗೆ ಅಪಮಾನ ಸಹಿಸದಂತಾ ಯಿತು. ಸನ್ನೆಯಿಂದಲೇ ಅಪ್ಪಣೆ ಮಾಡಿದನು.

' ಇಮಾ ವ್ಹಿಲೆಯರಣ್ಯದ ದಾರಿಹಿಡಿದು ಮೆರವಣಿಗೆಯು ಸಾಗಿತು. ಎರಡು ತಾಸುಗಳಲ್ಲಿ ಸಿಪಾಯಿಗಳು ಮರಳಿದರು. ಅವಳನ್ನು ಎಲ್ಲಿ ಗೊಯ್ದರು—ಏನು ಮಾಡಿದರು ಎಂಬುದು ಯಾರಿಗೂ ತಿಳಿಯದ ಮಾತು; ಏನೂ ಗೊತ್ತಾಗುವಂತಿಲ್ಲ.

' ಹಗಲಿರುಳು ಹಿಮವು ತೆರಪಿಲ್ಲದೆ ಬೀಳುತ್ತಿತ್ತು. ಬಟ್ಟಬಯಲು, ದಟ್ಟಡವಿ ಕೂಡ ಹಿಮದಿಂದ ಹೊಚ್ಚಿಹೋಗಿತ್ತು. ನರಿಗಳು ನಮ್ಮ ಮನೆಯ ಬಾಗಿಲಿಗೇ ಬಂದು ಕೂಗಾಡಲಾರಂಭಿಸಿದವು.

' ಪಾಪ! ಆ ಬಡಪ್ರಾಣಿ—ಹುಚ್ಚಿಯ ಚಿತ್ರವು ಯಾವಾಗಲೂ

ನನ್ನ ಕಣ್ಣೆದುರು ನಿಂತಂತೆ ಕಾಣುವದು. ಆಕೆಯ ವಿಚಾರವೇ ವಿಚಾರ ನನ್ನ ತಲೆಯಲ್ಲಿ. ಪೃಸಿಯನ್ನ ಅಧಿಕಾರಿಗಳನ್ನು ಹಲವು ಸಲ ಬಿನ್ನವಿಸಿ ಕೊಂಡೆನು. ಅವಳ ಬಗ್ಗೆ ಏನಾದರೂ ಸುದ್ದಿ ಸಿಕ್ಕೀತೆಂದು ನಾನು ಅವಳ ಶೋಧವಮಾಡಲು ಹುಚ್ಚೆದ್ದು ಮಾಡಿದ ಪ್ರಯತ್ನಗಳು ಅಷ್ಟಿಷ್ಟಲ್ಲ. ಆದರೇನು ? ತಿಲಮಾತ್ರವೂ ನೆಲೆ ಹತ್ತಲಿಲ್ಲ. ಮನಸಿನ ಹಳಹಳಿ ದಿನ ದಿನಕ್ಕು ಬೆಳೆಯಿತು.

‘ ಧ್ವಜಹಾರಿದ ಪೃಸಿಯನ್ನರು ವಸಂತಮಾಸವು ಬಂದೊಡನೆಯೆ ಇಲ್ಲಿಂದ ಕಾಲು ಕಿತ್ತಿದರು ಊರಲ್ಲಿಯ ಗದ್ದಲವು ಕಡಿಮೆಯಾಯಿತು. ಆದರೆ ನನ್ನ ನೆರೆಮನೆ ಮಾತ್ರ ಕದ ಕಟ್ಟಿಬಿಟ್ಟಿತ್ತು. ಎಂದಿನಂತೆ ಮನೆ ಯಲ್ಲ ಹಾಳು ಹಾಳು ಸುರಿಯುತ್ತಿದೆ ಮನೆಯ ಮುಂದಿನ ಕೈದೋಟ ದಲ್ಲಿ, ತಿರುಗಾಡುವ ದಾರಿಯಲ್ಲಿ ಎದೆಯುದ್ದ ಹುಲ್ಲು ದಟ್ಟಾಗಿ ಬೆಳೆದು ನಿಂತಿದೆ. ಚಳಿಗಾಲದಲ್ಲಿಯೇ ಆ ಮುದುಕ ಆಳುಮಗನು ಎಂದೋ ತೀರಿಕೊಂಡಿದ್ದನು ದಿಕ್ಕಿಲ್ಲದ ಆತನ ಮರಣಕ್ಕೆ ಮರುಗುವವರು ಯಾರು? ನಾನೊಬ್ಬನೇ ಮಾತ್ರ ಹೆಜ್ಜೆ ಹೆಜ್ಜೆಗೆ ನೆನೆಸುತ್ತಲೇ ಇದ್ದೆ. ಅವಳ ಮನೆ ಕಣ್ಣಿಗೆ ಬಿದ್ದೊಡನೆ ಅವಳ ಇಡಿಕಿಡೀ ಚಿತ್ರವು ನನ್ನನ್ನು ದಿಗಿಲುಗೊಳಿಸು ತ್ತಿತ್ತು. ಆ ಹೆಣ್ಣುಮಗಳನ್ನೊಯ್ದು ಅವರೇನು ಮಾಡಿದರು ? ಅಡವಿ ಯಿಂದ ಪಾರಾಗಿ ಅವಳೆಲ್ಲಿಗಾದರೂ ಓಡಿ ಹೋದಳೇ ? ಅನಾಥದೆಸೆಗೀ ಡಾದ ಅವಳು ಯಾವನಾದರೊಬ್ಬ ಪರೋಪಕಾರಿ ಜೀವಿಯ ಕೈಗೆ ಸಿಕ್ಕಿರ ಬಹುದೇ ? ಮಾತಾಡದ ಮೂಕಿಯಾದ ಅವಳನ್ನು ಅವನು ಅಂತಃಕರಣ ಪಟ್ಟು ದವಾಖಾನೆಗೆ ಸೇರಿಸಿರಬಹುದೇ ? ಕೂತಲ್ಲಿ–ನಿಂತಲ್ಲಿ ನನಗೆ ಈ ಎಲ್ಲ ಸಂಶಯುಗಳು ನಿರಸನವಾಗಲು ಯಾವ ಸಂದರ್ಭಗಳೂ ಒದಗಿಬರ ಲಿಲ್ಲ. ಆದರೆ ಕಾಲವು ನನ್ನ ಮನೋವ್ಯಥೆಯನ್ನು ಕ್ರಮೇಣ ಮರೆಮಾಡ ಹತ್ತಿ ಸಮಾಧಾನವನ್ನುಂಟುಮಾಡಿತು.

‘ ಶರತ್ಕಾಲದಲ್ಲಿ ಕಾಡಕೋಳಿಗಳ ಹಿಂಡಿಗೆ ಹಿಂಡೇ ಅಡವಿಯಲ್ಲಿ ಮನಬಂದಂತೆ ಅಲೆದಾಡುವದು. ನನ್ನ ಸಂದುಬೇನೆ ಸ್ವಲ್ಪ ಸಡಿಲಾದ್ದ ರಿಂದ ಅಡವಿಯ ವರೆಗೆ ಮೆಲ್ಲಮೆಲ್ಲಗೆ ನಡೆಯುತ್ತ ಬಂದೆ. ನನ್ನ ಕೈಗುರಿ

ಕಡಿಮೆಯಿರಲಿಲ್ಲ. ನಾಲ್ಕೈದು ಹಕ್ಕಿಗಳನ್ನು ಒಂದೇ ಹೊಡೆತಕ್ಕೆ ಸಾಯು ಗೊಂದಿದ್ದೇನೆ. ಬೇಟೆಯ ಉತ್ಸಾಹ ಇಮ್ಮಡಿಯಾಯಿತು. ಮತ್ತೊಂದು ಹಕ್ಕಿಯನ್ನು ಹೊಡೆದೆ. ಅದು ಟೊಂಗೆಗಳ ಝುಡುಪಿನಲ್ಲಿ ಬಿತ್ತು. ನನ್ನ ಪಾಲಿನದಾದುದರಿಂದ ನಾನದನ್ನು ಝುಡುಪಿನೊಳಗಿನಿಂದ ಹೊರತರಲೇ ಬೇಕೆಂದು ಆ ಹೊದರಿನೊಳಹೊಕ್ಕೆ. ವೈಗೆ ನಟ್ಟ ಮುಳ್ಳಿನ ಪರಿವೆ ಯಿಲ್ಲದೆ ಸತ್ತ ಹಕ್ಕಿಯನ್ನು ನೋಡಿದೆ. ಅಲ್ಲೊಂದು ಮನುಷ್ಯಡವಿಗೆ ಕಂಡಿತು. ಹಕ್ಕಿಯು ಅದರ ಬದಿಗೆ ಬಿದ್ದಿತ್ತು. ಏನೋ ಒಮ್ಮೆಲೇ ನೆನ ಪಾಯಿತು ಆ ಡವಿಗೆ–ಆ ಹುಚ್ಚು ಹೆಣ್ಣುಮಗಳು. ಏನಿದು ವಿಚಿತ್ರ! ಅವಳದೇ ಈ ಡವಿಗೆ. ಎಲ್ಲ ನೆನಪಾಯಿತು. ಆ ಕೇಡುಗಾಲ ವರ್ಷದಲ್ಲಿ ಇನ್ನೂ ಅದೆಷ್ಟು ಜನರು ಈ ಹಾಡಿಗೀಡಾಗಿರಬಹುದು! ಆದರೂ ನಿಶ್ಚಯವಾಗಿ ನಾನು ಹೇಳಬಲ್ಲೆ–ಅದೇಕೋ ನನಗೇ ತಿಳಿಯಲೊಲ್ಲದು– ನಾನು ನಿಂತಲ್ಲಿಯೇ ಅಲ್ಲಿಯೇ ದೊಪ್ಪನೆ ಬಿದ್ದೆ.

'ಎಷ್ಟು ಹೊತ್ತು ಬಿದ್ದಿದ್ದೆನೋ ಏನೋ ಈಗ ನೆನಪಾಗಲೊಲ್ಲದು. ಎದ್ದೆ. ತೀರ ಸಂಜೆಯಾಗಿತ್ತು. ಎಲ್ಲವೂ ಪೂರ್ವಜನ್ಮದಂತೆ ಮನದ ಮುಂದೆ ನಿಂತಿತು. ಇದೆಲ್ಲವೂ ಕಲ್ಪನಾಮಯವೇ ಎಂದು ಬಂದ ಸಂಶಯವು ಸುಳ್ಳಾಯಿತು. ಜನಶೂನ್ಯವಾದ ಅಡವಿಯಲ್ಲಿ ಅವಳನ್ನು ವೈರಿಯುವಂತಹ ಚಳಿಯಲ್ಲಿಯೇ ಆ ಹಾಸಿಗೆಯ ಮೇಲೆಯೇ ಬಿಟ್ಟು ಹೋಗಿದ್ದಾನೆ. ತನ್ನ ಛಲಕ್ಕೆ ಅಪನಂಬಿಕೆಯಾಗದಂತೆ, ಕೈಕಾಲುಗಳನ್ನು ನಸುವೂ ಅಲುಗಾಡಿಸದೆ ಹಿಮದ ಹಚ್ಚಡದಲ್ಲಿಯೇ ಅವಳು ತನ್ನ ಕಡೆ ಗಾಲವನ್ನು ತಂದುಕೊಂಡುಬಿಟ್ಟಳು' ಎಂದು ಅವನು ಉದ್ಗಾರ ತೆಗೆದನು.

ಉಳಿದುದೇನು? ರಕ್ತಮಾಂಸ ನಾಯಿ–ನರಿ–ಹದ್ದುಗಳ ಪಾಲು. ಅವಳ ಹರಿದು ಚಿಂದಿಯಾದ ಹಾಸಿಗೆ ಹಕ್ಕಿಗಳ ಗೂಡುಗಳ ಪಾಲು. ಅಸ್ಥಿ–ಅವಳ ಸ್ಮಾರಕ, ತನ್ನ ಪಾಲೆಂದು ಅವನು ಎದೆಗಪ್ಪಿಕೊಂಡನು. ಕಣ್ಣೀರು ಸುರಿಸುತ್ತ, ತಮ್ಮ ಮಕ್ಕಳು–ಮರಿಗಳು ಯುದ್ಧವನ್ನೆಂದಿಗೂ ನೋಡಬಾರದೆಂದು ಗಟ್ಟಿಯಾಗಿ ಚೀರಿಕೊಳ್ಳುತ್ತ ಮನೆಯನ್ನು ಮುಟ್ಟಿ ದನು. ಜನಗಳಿಗೂ ಕೇಳಿಸಿತೋ ಏನೋ ಯಾರು ಬಲ್ಲರು?

---

# ಕಾಕೋಟಿ

ನಾವು ಆಸ್ಪತ್ರೆಯಿಂದ ಹೊರಬೀಳುವದರಲ್ಲಿದ್ದೆವು; ಅಷ್ಟರಲ್ಲಿಯೇ ಒಂದು ಮೂಲೆಯೊಳಗೆ ನಾಯಿಯಂತೆ ಬೊಗಳುವ ಒಬ್ಬ ಮನುಷ್ಯನು ಕಣ್ಣಿಗೆ ಬಿದ್ದನು. ಬಡಕಾಟೆ, ಎತ್ತರವಾದ ಆಳು. 'ಕಾಕೋಟಿ, ನನ್ನ ಮುದ್ದು ಕಾಕೋಟಿ, ಬಾ, ಬಾ, ಇಲ್ಲಿ ಬಾರೆನ್ನ ಮುದ್ದೇ' ಎಂದು ತನ್ನ ತೊಡೆಗಳನ್ನು ತಟ್ಟಿಕೊಳ್ಳುತ್ತ ಇಂಪಾದ ಸಿಳ್ಳುದನಿಯಲ್ಲಿ ಅವನು ಕೂಗಿಕೊಳ್ಳುತ್ತಿದ್ದನು.

'ಅವನಿಗೇನಾಗಿದೆ' ಎಂದು ನಾನು ಡಾಕ್ಟರರನ್ನು ವಿಚಾರಿಸಿದೆನು.

'ಅಯ್ಯೋ, ಅದೊಂದು ದೊಡ್ಡ ಕತೆಯೇ ಇದೆ ಫ್ರೆಂಕಾಯಿಸ ನೆಂದು ಅವನ ಹೆಸರು. ಅವನೊಬ್ಬ ಬಂಡಿಹೊಡೆಯುವವನು. ಪಾಪ! ತನ್ನ ನಾಯಿಯನ್ನು ತಾನೇ ಮುಳುಗಿಸಿ ಕೊಂದದ್ದರಿಂದ ಅವನಿಗೆ ಹುಚ್ಚು ಹಿಡಿದಿದೆ' ಎಂದು ಡಾಕ್ಟರರು ಹೇಳಿದರು.

'ಹಾ! ಏನದು, ಕಥೆ-ಹೇಳಿರಿ. ಒಮ್ಮೊಮ್ಮೆ ತೀರ ಸಾಮಾನ್ಯ ಸಂಗತಿಗಳೇ ನಮ್ಮ ಮನಸಿಗೆ ಬಲು ಹತ್ತುವವು' ಎಂದು ನಾನು ಒತ್ತಾಯಪಡಿಸಿದೆನು.

ಇದೀಗ ಈ ಮನುಷ್ಯನ ಸಾಹಸ-ಅದೂ ಸಹ ಅವನ ಸಹೋದ್ಯೋಗಿಯಾದ ಗೆಳೆಯನಿಂದ ತಿಳಿದು ಬಂದಿದೆ.

ಪ್ಯಾರಿಸಪಟ್ಟಣದ ಉಪನಗರದಲ್ಲಿ ಅಷ್ಟು ಶ್ರೀಮಂತರಲ್ಲದಂಥ ಒಂದು ಕುಟುಂಬದವರು ಸೀಯಾನೆ ಹೊಳೆಯ ದಂಡೆಯ ಮೇಲೆ ಸುತ್ತಲೂ ಆಹ್ಲಾದಕರವಾದ ಹೂದೋಟದ ನಡುವಿರುವ ಮಾಟಾದ ಬಂಗಲೆಯೊಂದರಲ್ಲಿ ವಾಸಿಸುತ್ತಿದ್ದರು. ಅವರ ಆಳೆ ಈ ಫ್ರೆಂಕಾಯಿಸ, ಹಳ್ಳಿಯ ಹುಂಬ; ತುಸು ದಾಂಡಿಗನಾಗಿ ಕಂಡರೂ ವಿಧೇಯನು; ಮೆತ್ತಗಿನ ಸ್ವಭಾವದವನು.

ಒಂದು ದಿನ ಇಳಿಹೊತ್ತಿನಲ್ಲಿ ತನ್ನ ಯಜಮಾನನ ಮನೆಯ ದಾರಿ ಹಿಡಿದು ಅವನು ಸಾಗಿದಾಗ ಒಂದು ನಾಯಿಯು ಅವನ ಬೆನ್ನು ಹತ್ತಿತು.

ಮೊದಮೊದಲು ಅವನು ಅದಕ್ಕೆ ಲಕ್ಷ್ಯಗೊಡಲಿಲ್ಲ. ನಾಯಿಯು ಬರ ಬರುತ್ತ ಕಾಲಲ್ಲಿಯೇ ಬರಹತ್ತಿದ್ದರಿಂದ ಅವನು ನಿಲ್ಲಬೇಕಾಯಿತು; ನಿಂತನು. ಗುರುತಿನ ನಾಯಿಯಿರಬಹುದೆಂದು ಪರೀಕ್ಷಿಸಿದನು; ಆದರೆ ಈ ನಾಯಿಯು ಅವನ ಕಣ್ಣಿಗೆಂದೂ ಬಿದ್ದಿರಲಿಲ್ಲ

ನಾಯಿಯು ಹೆದರಿಕೆ ಬರುವಷ್ಟು ಸೊರಗಿತ್ತು; ಜೋತುಬಿದ್ದ ಕೆಚ್ಚಲು ಮಾತ್ರ ನೆಲಕ್ಕೆ ತಾಗುತಿತ್ತು. ನೋಡಿದರೆ ಕನಿಕರ ಹುಟ್ಟು ವಂಥ ಈ ನಾಯಿಯು, ಕಾಲೊಳಗೆ ಬಾಲವಿಟ್ಟುಕೊಂಡು ಇಳಿಬಿದ್ದ ಜೋಲು ಕಿವಿಗಳಿಂದ ಅವನ ಹಿಂದೆ ಹಿಂದೆ ಕುಕ್ಕೋಟದಿಂದ ಸಾಗಿದೆ. ಅವನು ನಿಂತರೆ ತಾನೂ ನಿಲ್ಲುತ್ತ, ಅವನು ಹೊರಟರೆ ಹೊರಡುತ್ತ ಅದು ಅವನ ಬೆನ್ನು ಬಿಡದೆ ಹೊರಟಿದೆ

' ಹಚ್ಯಾ, ಹಚ್ಯಾ, ಬೆನ್ನ ಹತ್ತಿ ಬರತೀದ್ಯಾ ಹೋಗತ್ತ ' ಎಂದು ಬೆದರಿಸುತ್ತ, ಎಲುಬಿನ ಹಂದರವಾದ ಆ ನಾಯಿಯಿಂದ ಪಾರಾಗಲು ಅವನು ಯತ್ನಿಸಿದನು. ಅದು ಅವನ ದನಿಗೆ ಬೆದರಿ ಕೆಲವು ಹೆಜ್ಜೆ ಹಿಂದೆ ಓಡಿ ಹೋಗುವದು; ಅವನು ಹೋಡಹತ್ತುವವರೆಗೆ ದಾರಿ ಕಾಯುತ್ತ ಕೂಡ್ರುವುದು; ಮುಂದೆ ಸಾಗಹತ್ತಿದನೆಂದರೆ ಅವನ ಬೆನ್ನ ಹಿಂದ್ಹಿಂದೆ ಮತ್ತೆ ಹೊರಡುವುದು.

ಅವನು ಕಲ್ಲನ್ನು ತೆಗೆದುಕೊಂಡು ಒಗೆಯುವಂತೆ ಕೈಯೆತ್ತಿದನು. ನೆವರಿದ ಕೈಯನ್ನು ಕಂಡು ಅದು ಹಿಂದಕ್ಕೆ ದಿಕ್ಕಾಪಾಲಾಗಿ ಓಡಿತು; ಅವನ ಬೆನ್ನು ತನ್ನ ಕಡೆಗಾಯಿತೋ ಇಲ್ಲವೋ ಎನ್ನುವಷ್ಟರಲ್ಲಿ ಮತ್ತೆ ಅವನ ಬೆನ್ನು ಹಿಂದೆ ಓಡುತ್ತ ಅದು ಹೊರಟಿತೇ.

ಇನ್ನು, ಅದು ತನ್ನ ಬೆನ್ನು ಬಿಡಲಾರದೆಂದು ದೃಢವಾಗಿ ನಂಬಿ, ಅವನು ಅದನ್ನು ಕರೆದನು. ಬಿಲ್ಲುಮಣಿತದಂತೆ ಬೆನ್ನನ್ನು ಮಣಿಸಿಕೊಂಡು ಕುಂಯಿಗುಡುತ್ತ ಸಲಿಗೆಯ ನಾಯಿಯಂತೆ ಅವನ ಹತ್ತಿರ ಬಂದಿತು. ಪಕ್ಕಡಿಯ ಎಲುಬುಗಳು ಎದ್ದು ಡುಬರಿಯಾಗಿ ಕಾಣುತ್ತಿದ್ದವು. ಮೈಮೇಲೆ ಕೈಯಾಡಿಸಿ ಬಲು ಮಿಡುಕಿದನು. ಕನಿಕರಪಟ್ಟು ' ನನ್ನೊಡನೆ ಬಾ ' ಎಂದು ಅವನು ಕಡೆಗೊಮ್ಮೆ ಅದನ್ನು ಕರೆದನು. ಕೂಡಲೆ ಅದು

ತನ್ನ ಬಾಲವನ್ನು ಅಲುಗಾಡಿಸಹತ್ತಿತು; ಅವನು ಕರೆದು ಸ್ವಾಗತಿಸಿದನೆಂದು ಹರುಷಬಟ್ಟು ದತ್ತಕ ಮಾಡಿಕೊಂಡನೆಂದು ಭಾವಿಸಿಕೊಂಡಿತೇನೋ ಯಾರು ಬಲ್ಲರು. ಪಾಪ! ಹೊಸ ಯಜಮಾನನ ಕಾಲಲ್ಲಿ ಸುಳಿದಾಡುವುದನ್ನು ಬಿಟ್ಟು ಅವನಿಗಿಂತ ಮುಂದೆಯೇ ಓಡತೊಡಗಿತ್ತು ನಂಬಿಗೆಯ ಸೇವಕನಂತೆ.

ತನ್ನ ಕೊಟ್ಟಿಗೆಯಲ್ಲಿಯೇ ಒಟ್ಟಿದ ಹುಲ್ಲಿನ ಮೇಲೆ ಅದನ್ನು ಮಲಗಿಸಿದನು; ಅದರ ಹೊಟ್ಟೆಗೆ ರೊಟ್ಟಿಯನ್ನು ತೆಗೆದುಕೊಂಡು ಬರಲು ಅಡುಗೆಮನೆಗೋಡಿದನು. ಅಂದು ಮಾತ್ರ ಅದರ ಹೊಟ್ಟೆತುಂಬಿತು. ಮುದ್ದಿಯಾಗಿ ಮಲಗಿಕೊಂಡಿತು.

ಅವನು ತನ್ನ ಯಜಮಾನನಿಗೆ ಮರುದಿನವೆ ನಾಯಿಯ ವಿಷಯವನ್ನು ತಿಳಿಸಿದನು; ಯಜಮಾನನೂ ಇರಲೊಲ್ಲದೇಕೆಂದು ಅಪ್ಪಣೆಮಾಡಿದನು. ಬಲು ಚುರುಕು ನಾಯಿ, ನಂಬಿಗೆಯನ್ನಿಡಲು ತಕ್ಕ ಪ್ರಾಣಿಯು ಅದಿತ್ತು.

ಆದರೆ, ಕೆಲವೆ ದಿನಗಳಲ್ಲಿ ಅದರಿಂದ ವಿಪರೀತ ತೊಂದರೆಯಾಗತೊಡಗಿತು. ವರ್ಷಾನುವರ್ಷವೆಲ್ಲವೂ ಅದಕ್ಕೆ ಹುಬ್ಬಿ-ಉತ್ತರಾ ಮಳೆಗಾಲ. ಸುತ್ತುಮುತ್ತಲಿನ ನಾಯಿಗಳೊಡನೆ ಗೆಳೆತನವನ್ನು ಮಾಡಿಕೊಳ್ಳಲು ಅದಕ್ಕೇನು ಹೊತ್ತೇ ಹಿಡಿಯಲಿಲ್ಲ. ಈ ಮನೆಯ ಸುತ್ತುಮುತ್ತ ಅವೆಲ್ಲ ನಾಯಿಗಳು ಮನೆಮಾಡಿಬಿಟ್ಟವು. ಉಚ್ಚ ನೀಚ ಜಾತಿಯ ಭೇದವನ್ನು ಲೆಕ್ಕಿಸದೆ ಆ ತಂಡೋಪತಂಡ ನಾಯಿಗಳೊಡನೆ ಅದು ವಿಹರಿಸಹತ್ತಿತು. ಹಲವು ನಾಯಿಗಳ ಬಳಗವನ್ನು ಕಟ್ಟಿಕೊಂಡು ತಿರುಗಾಡಲು ಅದು ಎಂದೂ ಬೇಸರಿಯುತ್ತಿದ್ದಿಲ್ಲ. ಅದು ದಣಿವನ್ನಾರಿಸಿಕೊಳ್ಳಲು ಗಿಡಗಂಟೆಗಳ ನೆರಳಿನಲ್ಲಿ ನಿಂತರೆ, ನಾಲಗೆಗಳನ್ನು ಹೊರತೆಗದು ತೇಕುತ್ತ ಆ ಎಲ್ಲ ನಾಯಿಗಳ ಬಳಗವು ಇದರ ಸುತ್ತ ಹತ್ತಂಬಾಳವನ್ನು ಕಟ್ಟುತ್ತಿದ್ದವು.

ಅಲ್ಲಿಯ ಜನರೆಲ್ಲರೂ ಇದರ ಆಗಮನವೊಂದು ದೊಡ್ಡ ಉತ್ಪಾತವೆಂದು ಭಾವಿಸತೊಡಗಿದರು. ಇಂಥ ಚಮತ್ಕಾರವನ್ನು ಅವರು ಈ ಮೊದಲೆಂದೂ ನೋಡಿರಲಿಲ್ಲ; ಬಲು ಆಶ್ಚರ್ಯಚಕಿತರಾಗಿದ್ದರು.

ದಿನದ ವಿಹಾರವನ್ನು ತೀರಿಸಿ ಸಂಜೆಗೆ ಅದು ಮನೆಗೆ ಬಂದಿತೆಂದರೆ ಎಲ್ಲ ನಾಯಿಗಳು ಮನೆಗೆ ಮುತ್ತಿಗೆ ಹಾಕುತ್ತಿದ್ದವು. ತೋಟಕ್ಕೆ ಹಾಕಿದ ಬೇಲಿಯ ಸಂದಿನೊಳಗಿಂದ ನುಗ್ಗುತ್ತಿದ್ದವು; ಹೂಮಡಿಗಳನ್ನು ಹಾಳುಮಾಡುತ್ತಿದ್ದವು. ಹೂಬಳ್ಳಿಗಳೊಳಗೆ ತಿರುಗಾಡಿ ಮುರಿದುಹಾಕುತ್ತಿದ್ದವು. ತೋಟದೊಳಗಿನ ಹೂ-ಬಳ್ಳಿ, ಹಣ್ಣಿನಗಿಡ ಮೊದಲಾದವುಗಳ ಬೇರುಗಳನ್ನು ಕೆದರಿ ತೋಟಗಾರನಿಗೆ ಕೆಲಸದ ಹೊರೆಯನ್ನೇ ಉಂಟು ಮಾಡುತ್ತಿದ್ದವು. ರಾತ್ರೆಂತರಾತ್ರೆಲ್ಲ ಅದು ವಾಸಿಸುತ್ತಿದ್ದ ಮನೆಯ ಸ್ಥಳದ ಸುತ್ತಮುತ್ತಲೆಲ್ಲ ಆ ನಾಯಿಗಳು ತೆರಪಿಲ್ಲದೆ ಬೊಗಳುತ್ತಿದ್ದವು. ಅಲ್ಲಿಂದ ಅವುಗಳೆಲ್ಲವೂ ಕಾಲುಕಿತ್ತಲು ಬೇರಿನ್ನಾವ ಮನವೊಲಿಸುವ ಸಾಧನಗಳೇ ಇರಲಿಲ್ಲ.

ಹಗಲು ಹೊತ್ತಿನಲ್ಲಿ ಅವುಗಳು ಮನೆಯೊಳಗೂ ನುಗ್ಗುವವು. ಅದೊಂದು ಮುತ್ತಿಗೆ-ಹಗಲದರೋಡೆ-ದಾಳಿ. ಕ್ಷಣಕ್ಷಣಕ್ಕೆ ಮನೆಯ ಜನರಿಗೆ ಮನೆಯ ತುಂಬೆಲ್ಲ ನಾಯಿಗಳೇ ಕಾಣುತ್ತಿದ್ದವು. ಕೋಣೆಗಳ ಮೂಲೆಗಳಲ್ಲಿ, ಬಾಗಿಲುಗಳ ಹಿಂದೆ, ಮೇಲಟ್ಟದ ಮೆಟ್ಟಲುಗಳ ಮೇಲೆ- ಎಲ್ಲಿ ನೋಡಿದರೂ ಮನೆಯಂತ ಮನೆಯೆಲ್ಲ ನಾಯಿಗಳೇ ನಾಯಿಗಳು. ಜೊಂಡು ಬಾಲದವು, ಮೊಂಡಬಾಲದವು, ಜೋಲು ಕಿವಿಯವು, ಬೇಟೆಯ ನಾಯಿಗಳು, ಮೆಕ್ಕೇ ನಾಯಿಗಳು, ಹಳದೀ ಬಣ್ಣದವು, ಕೆಂಪು ಬಣ್ಣದವು, ಕಪ್ಪು ಬಣ್ಣದವು, ಅಡವು ಹತ್ತಿದಂಥವು, ಬಿಡಾಡಿ ನಾಯಿಗಳು, ಹುಡುಗರು ನೋಡಿದರೆ ಹೆದರುವ ನ್ಯೂಫೌಂಡಲಂಡ ನಾಯಿಗಳು ಮೊದಲಾದ ನಾಯಿಗಳ ಪ್ರದರ್ಶನವೇ ತೆರೆದಂತೆ ಭಾಸವಾಗುತ್ತಿತ್ತು.

ಸುತ್ತಾರೆ ಹತ್ತು ಮೈಲಿನೊಳಗಿನ ಎಲ್ಲ ನಾಯಿಗಳು ಒಂದುಳಿಯದಂತೆ ಬಂದಿದ್ದವು. ಎಲ್ಲಿಂದ ಬಂದವು, ಹೇಗೆ ಬಂದವು-ಹೇಗೆ ಹೋಗುತ್ತಿದ್ದವು ? ಇದರ ಸುಳಿವು ಯಾರಿಗೂ ಹತ್ತಲು ಸಾಧ್ಯವಾಗಿರಲಿಲ್ಲ.

ಇಷ್ಟೆಲ್ಲವಿದ್ದರೂ ಫ್ರೆಂಕಾಯಿಸನು ಕಾಕೋಟೆಯನ್ನು ನೋಡಿ ಮನವಾರೆ ಹಿಗ್ಗುತ್ತಿದ್ದನು. 'ಕಾಕೋಟ್' ಎಂದು ಎಷ್ಟು ಮಮತೆಯಿಂದ ಅದನ್ನು ಕರೆಯುತ್ತಿದ್ದನು ! ಹಾಗೆ ಕರೆಯಲು ಅವನಿಗೆ ಎಷ್ಟೊಂದು

ಹಿಗ್ಗು ! ‘ ಇದು ನಾಯಿಯಲ್ಲ—ಮನುಷ್ಯಪ್ರಾಣಿ—ಬಾಯಿಯೊಂದೇ ಕಡಿಮೆ’ ಎಂದು ಅವನು ಮೇಲಿಂದಮೇಲೆ ಉದ್ಗಾರ ತೆಗೆಯುತ್ತಿದ್ದನು.

ಅದಕ್ಕೊಂದು ಕೆಂಪು ತೊಗಲಿನ ಕೊರಳ ಪಟ್ಟಿಯನ್ನು ಅವನು ಮಾಡಿಸಿದ್ದಾನೆ. ಆ ಸುಂದರವಾದ ಕೊರಳಪಟ್ಟಿಯ ನಡುವೆ ಒಂದು ತಾಮ್ರದ ಪಟ್ಟಿಯಿದೆ. ಅದರ ಮೇಲೆ ‘ ವೇಡಿನೊಯಿಸ್ಲೆ ಕಾಕೋಟಿ-ಬಂಡಿ ಹೊಡೆಯುವವನಾದ ಫ್ರೆಂಕಾಯಿೊಸನ ಸ್ವತ್ತು , ಸರ್ವಸ್ವ ’ ಎಂದು ಅಕ್ಷರಗಳನ್ನು ಕೆತ್ತಿಸಿದ್ದಾನೆ

ಅದೆ ಈಗ ಅಸಾಧಾರಣವಾಗಿದೆ ; ಎಷ್ಟು ಸೊರಗಿತ್ತೊ ಅಷ್ಟೇ ಈಗ ಸೊಕ್ಕಿದೆ, ಮೈಬಿಟ್ಟಿದೆ. ತುಂಬಿಕೊಂಡ ಕೆಚ್ಚಲು ಮಾತ್ರ ಮೊದಲಿನಂತೆ ಜೋತಾಡುತ್ತಿದೆ. ಅಡ್ಡಾಡಲು ಬರದಷ್ಟು ಮೈ ಬೆಳೆದಿದೆ; ಬೊಜ್ಜು ಬೆಳೆದ ಮನುಷ್ಯನು ನಡೆಯುವಂತೆ ಅದೂ ನಡೆಯಹತ್ತಿದೆ. ಓಡುವದಂತೂ ಕೈಸಾಗದ ಮಾತಾಗಿದೆ.

ವರುಷದಲ್ಲಿ ನಾಲ್ಕು ಸಲ ತಪ್ಪದೆ ಮರಿಹಾಕಿ ಸಂತಾನಾಭಿವೃದ್ಧಿಯ ಪ್ರತ್ಯಕ್ಷ ಫಲವನ್ನು ತೋರಿಸಹತ್ತಿತು. ನಾಯಿಜನ್ಮದ ಎಲ್ಲ ತರದ ಕುನ್ನಿಗಳನ್ನು ಅದು ಈಯಹತ್ತಿತು. ಫ್ರೆಂಕಾಯಿೊಸನು ಅಸಂಖ್ಯಾತವಾದ ಆ ಮರಿಗಳಲ್ಲಿ ಅತ್ಯುತ್ತಮವೆಂದೆನಿಸುವದೊಂದನ್ನು ಮಾತ್ರ ಹಾಲುಣ್ಣಲೆಂದು ಇಟ್ಟುಕೊಂಡು, ಮಿಕ್ಕವುಗಳನ್ನು ನಿಷ್ಕರುಣೆಯಿಂದ ಹೊತ್ತುಕೊಂಡು ಹೋಗಿ ಹೊಳೆಯಲ್ಲಿ ಎಸೆದುಬಿಡುತ್ತಿದ್ದನು.

ತೋಟಿಗನು ಬೇಸತ್ತು ಬೇಲಿಹೊಕ್ಕಂತೆ, ಮನೆಯ ಅಡುಗೆಯವಳೂ ದಿಗಿಲುಗೊಂಡಳು. ಒಲೆಯಲ್ಲಿ, ಕುಳ್ಳಿನಲ್ಲಿ, ಇದ್ದಲಿಯಲ್ಲಿ, ಕಟ್ಟಿಗೆಗಳಲ್ಲಿ, ಹಾಲು ಮೊಸರಿನ ಕಪಾಟಿನಲ್ಲಿ, ಅಡಕಲ ಗಡಿಗೆಗಳಲ್ಲಿ ನಾಯಿಗಳೇ ನಾಯಿಗಳು ಅವಳ ದೃಷ್ಟಿಗೆ ಬೀಳುತ್ತಿದ್ದವು; ಮತ್ತು ಅವುಗಳು ಸಿಕ್ಕ ಪದಾರ್ಥಗಳನ್ನು ತಿಂದುಹಾಕುತ್ತಿದ್ದವು; ತುಡುಗುಮಾಡಿ ಒಯ್ಯುತ್ತಿದ್ದವು.

ಇದೆಲ್ಲವನ್ನು ಕೇಳಿ, ನೋಡಿ, ಮನೆಯ ಯಜಮಾನನು ತಾಳ್ಮೆಗೆಟ್ಟನು. ಫ್ರೆಂಕಾಯೀಸನಿಗೆ ಈ ನಿನ್ನ ಕಾಕೋಟಿಯನ್ನು ಹೊರಗೆ

ಹಾಕೆಂದು ಅಪ್ಪಣೆ ಮಾಡಿಯೇ ಬಿಟ್ಟನು. ಇದನ್ನು ಕೇಳಿ ಅವನು ಬಲು ಮಿಡುಕಿದನು; ಬೇರೆ ಕಡೆಗೆ ಅದನ್ನು ಇಡಬೇಕೆಂದು ಯತ್ನಿಸಿದನು. ಯಾರಿಗೂ ಅದು ಬೇಕಿರಲಿಲ್ಲ. ನಿರಾಶೆ ಹೊಂದಿ ಕಡೆಗೊಮ್ಮೆ ಅದನ್ನು ಅಟ್ಟುವದೆಂದು ಅವನು ನಿಶ್ಚಯಿಸಿದನು. ಪ್ಯಾರಿಸ ಪಟ್ಟಣದ ಇನ್ನೊಂದು ಬದಿಗಿರುವ ಜೋವಿನವಿಲೆಪಾಂಟದ ಕಡೆಗೆ ಅದನ್ನು ಬಿಟ್ಟು ಬರಲು ಒಬ್ಬ ಮೋಟಾರಗಾಡಿಯವನ ಕಡೆಗೊಪ್ಪಿಸಿದನು.

ಅದೇ ಸಂಜೆಗೆ ಕಾಕೋಟೆಯು ಮರಳಿ ಬಂದಿತು. ಯಜಮಾನನ ಆಜ್ಞೆ ಮೀರಲಾಗದು. ಇನ್ನು ಸುಮ್ಮನಿದ್ದರೆ ಆಗದೆಂದನು; ಒಳ್ಳೆ ಉಪಾಯ ಮಾಡಬೇಕೆಂದು ಹಂಚಿಕೆ ಹಾಕಿದನು. ಅವನು ಉಗಿಬಂಡಿಯ ರಕ್ಷಕನಿಗೆ ಐದು ಫ್ರಾಂಕುಗಳನ್ನು ತೆತ್ತು, ಹಾವ್ರೆಗೆ ತೆಗೆದುಕೊಂಡು ಹೋಗಿ ಬಿಟ್ಟು ಬರಲು, ಅವನ ಮನವೊಲಿಸಿದನು; ಅವನೂ ಒಪ್ಪಿದನು. ರಕ್ಷಕನ ಕಡೆಗೆ ಅದನ್ನು ಒಪ್ಪಿಸಿದನು.

ಮೂರು ದಿನಗಳ ಮೇಲೆ ಅದು ತನ್ನ ಸ್ಥಳದಲ್ಲಿ ಪ್ರತ್ಯಕ್ಷವಾಗಿ ಕುಳಿತಿತ್ತು; ಬೇಸತ್ತು, ಬೆಂಡಾಗಿ ಬಳಲಿದವರಂತೆ ಕಾಣುತ್ತಿತ್ತು.

ಅದರ ಯಜಮಾನನು ಬಹಳ ಕನಿಕರಪಟ್ಟನು; ಮತ್ತೆ ಒತ್ತಾಯ ಮಾಡದವನಾದನು.

ಆದರೆ, ಹಿಂದಿನಗಿಂತಲೂ ಈಗ ನಾಯಿಗಳ ಸಂಖ್ಯೆ ಇನ್ನಿಷ್ಟು ಹೆಚ್ಚಾಯಿತು; ಆರ್ಭಟೆಯೂ ಮತ್ತಿಷ್ಟು ಭೀಕರವಾಯಿತು ಒಂದಿನ ಸಂಜೆಯಲ್ಲಿ ಮೇಜವಾನಿಯ ಸಿದ್ಧತೆ ನಡೆದಿತ್ತು. ಅಡುಗೆಯವಳ ಕಣ್ಣೆದುರಿನಲ್ಲಿಯೇ ಒಂದು ನಾಯಿಯು ಕಾಡುಗೋಳಿಯಿಂದ ಸಿದ್ಧಮಾಡಿದ ಪಕ್ವಾನ್ನವನ್ನು ತೆಗೆದುಕೊಂಡು ಓಡಿತು. ಆದರೆ ಅವಳಿಗೆ ಕಸಿದು ಕೊಳ್ಳುವ ಧೈರ್ಯವಾಗಲಿಲ್ಲ. ಅಡುಗೆಯವಳು ಯಜಮಾನನ ಕಿವಿಗೆ ಈ ಸುದ್ದಿಯನ್ನು ಹಾಕಿದಳು.

ಈ ಸಲ ಮಾತ್ರ ಯಜಮಾನನ ಸಿಟ್ಟು ಆಟೋಪ ಮೀರಿತು. 'ನಾಳೆ ಬೆಳಗಾಗುವದರಲ್ಲಿ ನೀನು ಈ ನಾಯಿಯನ್ನು ಒಯ್ದು ಹೊಳೆಯಲ್ಲಿ ಮುಳುಗಿಸದಿದ್ದರೆ ನಿನ್ನನ್ನೇ ನಾನು ಗುಂಡುಹೊಡೆದು ಕೊಲ್ಲು

ತ್ತೇನೆ' ಎಂದು ಯಜಮಾನನು ಫ್ರೆಂಕಾಯಿಸನನ್ನು ಕರೆದು ಸಿಟ್ಟಿನಿಂದ ಹೇಳಿದನು.

ಆಳುಮನುಷ್ಯನು ನಡುಗಹತ್ತಿದನು; ವಿಚಾರಗಳ ಗೊಂದಲದಲ್ಲಿ ಬಿದ್ದು, ನೆಟ್ಟಗೆ ತನ್ನ ಕೋಣೆಗೆ ಹೋದನು. ಹೋದವನೆ ಈ ಯಜಮಾನನ ಮನೆಯ ಕೆಲಸವನ್ನೆ ಬಿಟ್ಟು ಹೋಗುವದೇ ಉಚಿತವೆಂದು ತನ್ನೆಲ್ಲ ಸಾಮಾನುಗೀಮಾನುಗಳನ್ನು ಕಟ್ಟಹತ್ತಿದನು. ವಿಚಾರ ಲಹರಿಯು ಸಾಧಕ-ಬಾಧಕ ದಂಡೆಗಳಲ್ಲಿ ಹರಿಯತೊಡಗಿತು. ಎಲ್ಲರಿಗೂ ಬೇಡಾದ ಈ ಪ್ರಾಣಿಯನ್ನು ಕಟ್ಟಿಕೊಂಡು ತಾನು ಎಲ್ಲಿಗಾದರೂ ಹೋದರೆ, ಈ ಜಗದೊಳಗೆ ತನಗೆ ಸ್ಥಾನವಿದೆಯೇ ಎಂದು ಎಣಿಕೆ ಹಾಕಿದನು. ತಾನೀಗಿದ್ದ ಮನೆ-ಎಲ್ಲ ರೀತಿಯಿಂದ ಅನುಕೂಲವಾದುದು; ಒಳ್ಳೆಯದು. ಸಂಬಳವೋ ತನ್ನ ಯೋಗ್ಯತೆಗೆ ತಕ್ಕಷ್ಟು. ತಿನಲುಡಲು ಕಡಿಮೆಯಿಲ್ಲ. ಮನೆಯವರೂ ಬಂಗಾರದಂಥವರು. ಇಂತಿರುವದೆಲ್ಲವನ್ನು ಈ ಪ್ರಾಣಿಯೊಂದಕ್ಕಾಗಿ ತ್ಯಜಿಸಿ, ಬೇರೆಡೆಗೆ ಹೋಗುವದು ಹೆಡ್ಡತನವಾಗುವದೆಂದು ಲೆಕ್ಕ ಹಾಕಿಯೇ ಹಾಕಿದನು. ತನ್ನ ಉಪಜೀವನಕ್ಕೆ ಸೊನ್ನೆ ಬೀಳುವದೆಂದೂ-ವಿಹಿತವಾದ ಮಾರ್ಗವನ್ನವಲಂಬಿಸಿಕೊಂಡಿರುವದೇ ತನಗೆ ತಕ್ಕದ್ದೆಂದು ಗೊತ್ತುಮಾಡಿಕೊಂಡನು; ಬೆಳಗು ಹರಿಯುವದರಲ್ಲಿಯೇ ನಾಯಿಯ ವ್ಯವಸ್ಥೆಗೊಳಿಸುವದೆಂದು ಗೊತ್ತುಮಾಡಿ, ವಿಚಾರಗಳ ಹೊಯ್ದಾಟವನ್ನು ನಿಲ್ಲಿಸಿಬಿಟ್ಟನು.

ಹೇಗೋ-ಏನೋ ನಿದ್ರೆಯಲ್ಲಿ ರಾತ್ರಿ ಕಳೆದಿತು. ಚುಮುಚುಮು ನಸುಕಿನಲ್ಲಿ ಎದ್ದನು; ಗಟ್ಟಿಮುಟ್ಟಿಯಾದ ನೂಲಿನ ಹಗ್ಗವೊಂದನ್ನು ಕೈಯಲ್ಲಿ ಹಿಡಿದುಕೊಂಡು ನಾಯಿಯಿದ್ದ ಸ್ಥಳಕ್ಕೆ ಬಂದನು. ಅದೂ ಮೆಲ್ಲಗೆ ಏಳುವದರಲ್ಲಿದ್ದಿತು; ಎದ್ದು ಮೈಮುರಿದುಕೊಂಡು ತನ್ನ ಯಜಮಾನನನ್ನು ಬರಮಾಡಿಕೊಳ್ಳುವಂತೆ ಬಲು ಸಲಿಗೆಯಿಂದ ಬಾಲವನ್ನಲ್ಲಾಡಿಸುತ್ತ ಅವನ ಹತ್ತಿರಕ್ಕೆ ಬಂದಿತು. ಅವನ ಧೈರ್ಯವು ಕುಗ್ಗಿತು; ಮೆಲ್ಲಗೆ ಮೈಮೇಲೆ ಕೈಯಾಡಿಸಿದನು. ಉದ್ದವಾದ ಕಿವಿಗಳನ್ನು ಹಿಡಿದು ಹಿಂಡಿದನು. ಮುಖಕ್ಕೆ ಮುದ್ದಿಟ್ಟನು. ಅಚ್ಚೆಯ ಅನೇಕ ಹೆಸರುಗಳಿಂದ ಕರೆದು ಅದರೊಡನೆ ಚಿನ್ನಾಟವಾಡಿದನು.

ಆರು ಬಡಿದ ಗಡಿಯಾಳದ ಸಪ್ಪಳವು ಕೇಳಿಸಿತು; ಇನ್ನು ತಡ ಮಾಡಿ ಉಪಯೋಗವಾಗಲಾರದೆಂದನು. ಬಾಗಿಲನ್ನು ತೆರೆದು 'ಬಾ' ಎಂದು ಅವನೆಂದನು ಅದು ಚಿನ್ನಾಟವಾಡುತ್ತ ಮೈಮೇಲೇರಿತು. ಹೊರಗೆ ತಿರುಗಾಡಲು ಒಯ್ಯುವನೆಂದು ತಿಳಿದುಕೊಂಡಿದ್ದಿತೋ-ಏನೋ!

ನಾಯಿಯೊಡನೆ ಅವನು ಹೊಳೆಯ ದಂಡೆಗೆ ತಲುಪಿದನು; ಆಳ ವಿದ್ದ ನೀರಿನ ಸ್ಥಳವನ್ನು ನಿಶ್ಚಯಿಸಿದನು. ಹಗ್ಗದ ಒಂದು ತುದಿಯನ್ನು ನಾಯಿಯ ಕೊರಳುಪಟ್ಟಿಗೆ ಗಟ್ಟಿಯಾಗಿ ಕಟ್ಟಿ ಇನ್ನೊಂದರಿಂದ ದೊಡ್ಡ ಬಂಡೆಗಲ್ಲನ್ನು ಕಟ್ಟಿದನು. ನಾಯಿಯನ್ನು ಕೈಯಿಂದೆತ್ತಿ, ಅಮಿಕೆ, ಅಗಲುವಾಗ ಜನರು ಒಬ್ಬರನ್ನೊಬ್ಬರು ಅಪ್ಪಿಕೊಂಡು ಮುದ್ದಿಡುವಂತೆ ಕೋಪಾಕುಲನಾಗಿ ಮುದ್ದಿಟ್ಟನು. ಕುತ್ತಿಗೆಯ ಹತ್ತಿರ ಅದನ್ನು ಗಟ್ಟಿ ಯಾಗಿ ಹಿಡಿದುಕೊಂಡು 'ನನ್ನ ಮುದ್ದು ಕಾಕೋಟಿ, ನನ್ನ ಚಿಕ್ಕ ಕಾಕೋಟಿ' ಎಂದು ರಮಿಸುವ ದನಿಯಿಂದ ಚಿನ್ನಾಟವಾಡಿದನು. ಅದೂ ಕುಂಯಿಗುಡುತ್ತ ಸಲಿಗೆಯ ಸಂತೋಷವನ್ನು ಅಂಗಾಂಗಗಳಿಂದ ತೋರ್ಪಡಿಸುತ್ತಲಿದ್ದಿತು.

ಹತ್ತಾರು ಸಲ ಹೊಳೆಯಲ್ಲಿ ಬಿಸುಟಲು ಮಾಡಿದ ಪ್ರಯತ್ನಗಳು ಸಫಲವಾಗಲಿಲ್ಲ; ಎದೆಗುಂದಿ ಹೋಗಿದ್ದನು.

ಎಲ್ಲಿಯ ಧೈರ್ಯ ಬಂದಿತೋ-ಏನೋ-ಕಡೆಗೊಂದು ಸಲ ಶಕ್ಯ ವಿದ್ದ ಶಕ್ತಿಯಿಂದ ಅದನ್ನು ಹೊಳೆಯೊಳಗೆ ಎಸೆದನು. ಈಸುವಂತೆ ಈಸ ಬೇಕೆಂದು ಮೊದಮೊದಲು ಅದು ಪ್ರಯತ್ನಪಟ್ಟಿತು. ಕಲ್ಲಿನ ಭಾರದಿಂದ ತಲೆಯೇ ಮೇಲೆತ್ತಲಾಗಲಿಲ್ಲ ಅದಕ್ಕೆ. ನೀರಿನಲ್ಲಿ ಮುಳುಗುವ ಮನು ಷ್ಯನು ಒದ್ದಾಡಿ ಕಣ್ಣುಬಿಡುವಂತೆ, ಅದೂ ಯಜಮಾನನ ಕಡೆಗೆ ಕಡೆಯ ಆಶಾಭಂಗವಾದ ನೋಟದಿಂದ ನೋಡಿತು. ತಲೆ ಮುಳುಗಿತು. ಹೊಟ್ಟೆ, ನಡ, ಸಾವಿನ ಸಂಕಟದಿಂದ ಬಡಿದಾಡುವ ಕಾಲುಗಳೂ ಕಾಣದಾದವು.

ನೀರು ಕುದಿಯುತ್ತಿರುವಂತೆ ಐದು ನಿಮಿಷಗಳ ವರೆಗೆ ಗುಳ್ಳೆಗಳು ಏಳಲಾರಂಭಿಸಿದವು. ರಾವುಗೆಟ್ಟ ಮುಖದಿಂದ ಫ್ರೆಂಕಾಯಿಾಸನು ದಿಗ್ಭ್ರಮೆಗೊಂಡಂತಾದನು; ಎದೆಯು ಒಂದೇ ಸವನೆ ಡಡಡಡ

ಬಡಿದುಕೊಳ್ಳುತ್ತಿತ್ತು. ಕಾಕೋಟಿಯು ಜಿಗಟುಮಣ್ಣಿನಲ್ಲಿ ಮಣ್ಣಾಯಿತೆಂದು ಭಾವಿಸಿಕೊಂಡನು 'ಈಗ ಅದು ನನ್ನ ಬಗ್ಗೆ ಏನು ತಿಳಿದುಕೊಂಡಿರಬೇಕು' ಎಂದು ಮುಗ್ಧಭಾವದಿಂದ ತನ್ನಷ್ಟಕ್ಕೆ ತಾನೆ ಅಂದುಕೊಂಡನು.

ಅಂದಿನಿಂದ ಅವನು ಹುಚ್ಚನಾದನು ತಿಂಗಳವರೆಗೆ ಹಾಸಿಗೆ ಹಿಡಿದನು. ಪ್ರತಿದಿನ ರಾತ್ರಿ ಅವನಿಗೆ ಆ ನಾಯಿ ಮತ್ತೆ ಮತ್ತೆ ಕಂಡಂತಾಗುತ್ತಿತ್ತು. ಅದು ತನ್ನ ಕೈಯನ್ನು ನೆಕ್ಕುತ್ತಿದೆಯೆಂದು ಭಾಸವಾಗುತ್ತಿತ್ತು; ಅದು ಬೊಗಳುತ್ತಿರುವಂತೆ ಅವನಿಗೆ ಕೇಳಿಸುತ್ತಿತ್ತು.

ಮನೆಯವರು ವೈದ್ಯರನ್ನು ಕರೆತಂದರು. ಕೊನೆಗೊಮ್ಮೆ ಅವನಿಗೆ ನೆಟ್ಟಗಾಯಿತು. ರೌಯೆನ ಹತ್ತಿರವಿರುವ ಬಾಯಿಸಾರ್ಡ ಎಂಬ ತಮ್ಮ ವಳಿತಪ್ರದೇಶಕ್ಕೆ ಯಜಮಾನ ಯಜಮಾನತಿಯರು ಅವನನ್ನು ಕರೆದೊಯ್ದರು.

ಅವನು ಅಲ್ಲಿಯೂ ಆ ಹೊಳೆಯ ದಂಡೆಯ ಮೇಲಿದ್ದನು. ಅವನು ಈಸಾಡಲು ನದಿಗೆ ಹೋಗುತ್ತಿದ್ದನು. ಕುದುರೆ ಚಾಕರಿಯವನೂ ಫ್ರೆಂಕಾಯಿೊಸನೊಡನೆ ಈಸಲು ಹೋಗುತ್ತಿದ್ದನು. ದಿನಾಲೂ ಆ ದಂಡೆಯನ್ನು ಕಂಡು ಬರುತ್ತಿದ್ದರು.

ಒಂದು ದಿನ ಅವರಿಬ್ಬರೂ ಈಸುತ್ತ, ನೀರನ್ನು ಕೈಯಿಂದ ಬಡಿಯುತ್ತ ಚಲ್ಲಾಟವಾಡುತ್ತಿದ್ದರು. ಒಮ್ಮೆಲೆ ಫ್ರೆಂಕಾಯಿೊಸನು 'ನೋಡು, ನಮ್ಮ ಕಡೆಗೆ ಏನೋ ತೇಲಿ ಬರುತ್ತಿದೆ. ಇಂದು ನಿನಗೆ ಮಾಂಸದ ತಿಂಡಿಯನ್ನು ಬೇಕಾದಷ್ಟು ಕೊಡುತ್ತೇನೆ' ಎಂದು ಸಂಗಡಿಗನಿಗೆ ಕೇಳುವಂತೆ ಕೂಗಿಕೊಂಡನು.

ಅದೊಂದು ದೊಡ್ಡ ಹೆಣ; ಬಾತಿದೆ. ಕೂದಲುಗಳಿಲ್ಲವೂ ಉದುರಿವೆ. ಸೆಟೆದಿದ್ದ ಕಾಲುಗಳು ಮಾತ್ರ ಪ್ರವಾಹದಗುಂಟ ಹರಿದು ಬರುವಂತೆ ಕಾಣುತ್ತಿದ್ದವು.

ಫ್ರೆಂಕಾಯೀಸನು ಅದರ ಹತ್ತಿರ ಹೋದನು; ನಗೆಚೇಷ್ಟೆಯಿಂದ 'ಓಹೋ! ದೊಡ್ಡದೇ ಇದೆ! ಏನು ನಮ್ಮ ದೈವ ಇಂದು! ಬೇಕಾದಷ್ಟು ಮಾಂಸ!' ಎಂದನು. ಅವನು ಕೊಳೆತು ಹೊಲಸನಾರುವ ಆ

ಹೆಣದಿಂದ ಸ್ವಲ್ಪ ದೂರ ಸರಿದು ಸುತ್ತುಮುತ್ತೆಲ್ಲ ನಿರೀಕ್ಷಿಸಿದನು

ನೋಡಿದವನೆ ಒಮ್ಮೆಲೆ ಶಾಂತನಾದನು; ಚಕಿತದೃಷ್ಟಿಯಿಂದ ನೋಡಹತ್ತಿದನು. ಈಸಲ ಮುಟ್ಟಿ, ತಟ್ಟಿ ನೋಡಬೇಕೆಂದು ಮತ್ತಿಷ್ಟು ಸನಿಯಕ್ಕೆ ಹೋದನು. ಕೊರಳುಪಟ್ಟಿಯನ್ನು ತೆರೆಗಣ್ಣುಗಳಿಂದ ತಿರುತಿರುವಿ ಪರೀಕ್ಷಿಸಿದನು. ಅದರ ಕುತ್ತಿಗೆಯ ಹತ್ತಿರ ಕೈ ಹಾಕಿ ಇನ್ನೂ ಪರೀಕ್ಷಿಸಿದನು. ಕಣ್ಣು ಹತ್ತಿರ ಹಿಡಿದುಕೊಂಡು ಕಿಲುಬು ಕಿಲಬಾದ ತಾಮ್ರದ ಪಟ್ಟಿಯನ್ನೂ, ತೀರ ಕೊಳೆತು ಹೋದ ತೊಗಲಪಟ್ಟಿಯನ್ನೂ ಗಾಬರಿಗಣ್ಣುಗಳಿಂದ ನೋಡಿದನು. 'ಮೆಡಿಮೊಯಿಸ್ಲೆ ಕಾಕೋಟೆ, ಬಂಡಿ ಹೊಡೆಯುವ ಫ್ರೆಂಕಾಯೀಸನ ಸ್ವತ್ತು' ಎಂದು ಬರೆದುದನ್ನು ಓದಿದನು.

ತನ್ನ ಮನೆಯಿಂದ ಅರುವತ್ತು ಮೈಲುಗಳಾಚೆ ಸತ್ತ ನಾಯಿಯು ತನ್ನ ಯಜಮಾನನ್ನು ಕೂಡಿಕೊಂಡಿತು; ಯಜಮಾನನು ತನ್ನ ನಾಯಿಯನ್ನು ಪಡೆದನು.

ಅವನು ಎದೆಯೊಡುವಂತೆ ಭೀಕರವಾಗಿ ಚೀರಿಕೊಂಡನು. ದಂಡೆಯ ಕಡೆಗೆ ತನ್ನ ಶಕ್ತಿ ಸಾಲುವಷ್ಟು ಕಸುವಿಸಿಂದ ಒಂದೆ ಸವನೆ ಕಿರಿಚುತ್ತ ಈಸಹತ್ತಿದನು. ದಡವನ್ನು ಮುಟ್ಟಿದ. ಅರ್ಧಮರ್ಧ ಬತ್ತಲೆಯಾಗಿ ಹಳ್ಳಿಯ ತುಂಬೆಲ್ಲ ಸಿಕ್ಕ ಸಿಕ್ಕ ಹಾಗೆ ಒದರಹತ್ತಿದ; ಅವನಿಗೆ ಹುಚ್ಚು ಹಿಡಿದುಬಿಟ್ಟಿತು.

---

# ಗುರುಮಹಾರಾಜರು

ಫ್ರಾನ್ಸ್‌ದೇಶದಲ್ಲಿ ರಾಜ್ಯಕ್ರಾಂತಿಯಾಗಿ ಇದೀಗ ಹೊಸಯುಗವು ತಲೆದೋರಹತ್ತಿದೆ. ಮೊದಲಿನ ಧರ್ಮದ ಮೂಢಭಾವನೆಗಳು ಈಗ ಹೇಳಹೆಸರಿಲ್ಲದೆ ಮುಳುಗಹತ್ತಿವೆ. ಕೆಲವರಂತೂ ಹೇಳಿಕೇಳಿ ನಾಸ್ತಿಕರಾಗಿದ್ದಾರೆ. ಹಳೆಯ ಧರ್ಮ ಹಾಳಾಗಿ ಹೊಸ ಧರ್ಮವು ಸಹಜವಾಗಿ ಭರದಿಂದ ಸಾಗಹತ್ತಿದೆ. ಇಂಥ ಕಾಲದಲ್ಲಿ ಅಂಧಾನುಕಾರಿಗಳಾದ ಧಾರ್ಮಿಕರು ನಗೆಗೀಡಾಗುವುದರಲ್ಲಿ ಆಶ್ಚರ್ಯವೇನು ?

ಈ ಸಮಯ ಸಾಧಿಸಿ ಒಂದು ಸಣ್ಣ ಸಂಗತಿಯು ನಡೆದು ಹೋದುದರಿಂದ ಕೆಲಕಾಲವಾದರೂ ಹಳೆಯ ಧರ್ಮತತ್ತ್ವಗಳಿಗೆ ಬೆಂಬಲವು ಸಿಕ್ಕಿದಂತಾಗಿದ್ದಿತು.

ಹಳೆಯ ಕಾಲದ ದೊಡ್ಡ ಸರದಾರರ ಒಂದು ಮನೆತನದ ತರುಣನೊಬ್ಬನು ಒಂದು ದಿವಸ ಪ್ಯಾರಿಸ್ ಪಟ್ಟಣದ ಫೌಜುದಾರರ ಕಡೆಗೆ ಬಂದನು; ತನಗೊದವಿದ ಸಂಕಟವನ್ನು ಸಂಪೂರ್ಣವಾಗಿ ಅವರಿಗೆ ತಿಳಿಸಿದನು. ತನ್ನನ್ನು ಈ ಆಪತ್ತಿನಿಂದ ಪಾರುಮಾಡಬೇಕೆಂದು ಬಿನ್ನವಿಸಿಕೊಂಡನು.

‘ ಈ ನನ್ನ ಆಸ್ತಿಯಲ್ಲಿ ನಿನಗೆ ಒಂದು ಕವಡಿಯನ್ನು ಸಹ ಕೊಡುವದಿಲ್ಲೆಂದು ನನ್ನ ತಂದೆಯು ಇತ್ತೀಚೆಗೆ ಅನ್ನಹತ್ತಿದ್ದಾನೆ; ಬೆದರಿಸಹತ್ತಿದ್ದಾನೆ. ಇಲ್ಲಿಯವರೆಗೆ ನಾನು ನನ್ನ ತಂದೆಗೆ ವಿಧೇಯನಾಗಿ ನಡೆದುಕೊಂಡಿದ್ದೇನೆ. ಆದರೆ ಒಂದು ಕೀಳು ಕಾರಣಕ್ಕಾಗಿ ನನ್ನ ಮೇಲೆ ತಂದೆಯು ಈಗ ಬೆಂಕೀಕಾರಹತ್ತಿದ್ದಾನೆ. ತಂದೆಯು ಹಾಗೆ ಧರ್ಮದ ಮೇಲೆ ವಿಶ್ವಾಸವು ನಿಜವಾಗಿ ನನ್ನಲ್ಲಿ ಇಲ್ಲದಿರುವುದೇ ಒಂದು ಅಪರಾಧವೆಂದು ತಿಳಿದುಕೊಂಡಿದ್ದಾನೆ. ನಾನು ಎಲ್ಲ ಧರ್ಮಗಳನ್ನೂ ತಿಳಿದುಕೊಂಡೇ ನನಗೆ ಸಂಬಂಧ ಧರ್ಮದಿಂದ ವರ್ತಿಸಹತ್ತಿದ್ದೇನೆ. ಆದುದರಿಂದ ತಂದೆಗೆ ಇದು ವಿಪರೀತವಾಗಿ ತೋರಿ, ಅವನು ನನಗೆ ಈ ಆಸ್ತಿಯ ವಿಷಯವಾಗಿ ಕಾಟಕೊಡಲು ತೊಡಗಿದ್ದಾನೆ. ತನ್ನೆಲ್ಲ ಆಸ್ತಿಯನ್ನು

ತನ್ನ ಧರ್ಮದ ಸಹಾಯಕ್ಕಾಗಿ ಧಾರೆಯೆರೆಯುವವನಿದ್ದಾನೆ ನನ್ನ ಕೈಯಲ್ಲಿ ಪರಟೆ ಬರುವ ಭೀತಿಯುಂಟಾಗಿದೆ' ಎಂದು ತರುಣನು ಮಾತು ಮುಗಿಸಿದನು.

'ತಮ್ಮ ಆಸ್ತಿಯನ್ನು ಈ ರೀತಿ ವ್ಯವಸ್ಥೆ ಮಾಡುವವರಿದ್ದಾರೆಂಬುದು ನಿನಗೆ ಹೇಗೆ ತಿಳಿದು ಬಂದಿತು?' ಎಂದು ಅಧಿಕಾರಿಯು ವಿಚಾರಿಸಿದನು.

'ನಮ್ಮಜ್ಜನ ತಲೆಯಿಂದ ನೌಕರಿಮಾಡುತ್ತ ಬಂದಿರುವಂಥ ಒಬ್ಬ ಕಾರಕೂನನಿದ್ದಾನೆ ನಮ್ಮ ಮನೆಯಲ್ಲಿ. ಅವನು ನನ್ನನ್ನು ಬಹಳೇ ಪ್ರೀತಿಸುತ್ತಾನೆ; ವಿಶ್ವಾಸದಿಂದ ನೋಡಿಕೊಳ್ಳುತ್ತಾನೆ. ಮೊನ್ನೆ ಅವನೇ ಬಂದು ಈ ಸುದ್ದಿಯನ್ನು ನನಗೆ ಮುಟ್ಟಿಸಿದನು. ಇಷ್ಟು ದಿವಸಗಳವರೆಗೆ ನಾನೂ ತಂದೆಯೂ ಅತ್ಯಂತ ಪ್ರೀತಿಯಿಂದಿದ್ದೆವು; ಸುಖದಿಂದಿದ್ದೆವು. ಆದರೀಗ ಮಾತ್ರ ಆ ಸುಖ, ಆ ಪ್ರೇಮಗಳೆಲ್ಲವೂ ನಮ್ಮ ಮನೆ ಬಿಟ್ಟು ಹೊರಟು ಹೋಗಿವೆ. ತಂದೆಯು ತನ್ನ ಆ....ಆ....ಧರ್ಮಗುರುವೆಂಬವನ ಸನ್ನಿಧಿಯಲ್ಲಿ ಹಗಲಿರುಳೂ ಕಾಲಕಳೆಯುವನು. ಅವನದೇ ಹುಚ್ಚು ಅವನಿಗೆ. ಈ ಸುಡುಗಾಡು ಧರ್ಮಗುರುವು ಪ್ರವೇಶ ಮಾಡಿದ ಮನೆಗಳು ರಸಾತಳವನ್ನು ಕಾಣುವದೇ ಖಂಡಿತ' ಎಂದು ತರುಣನು ಉತ್ತರ ಕೊಟ್ಟನು.

'ನೀನು ಹೇಳುವದರ ಮೇಲಿಂದ ನೋಡಿದರೆ ಮಾತ್ರ, ಸುದ್ದಿಯು ನಿಜವಾದುದೆಂದು ನನಗೆ ಕಾಣಹತ್ತಿದೆ; ಆದರೆ ಇಂಥ ಕೆಲಸದಲ್ಲಿ ನನ್ನಿಂದ ಯಾವ ಸಹಾಯವೂ ಆಗಲಾರದೆಂದು ನನಗನಿಸುತ್ತದೆ. ಆದರೆ, ನಿನ್ನ ಈ ಸ್ಥಿತಿಯನ್ನು ನೋಡಿ ಬಹಳೇ ಕನಿಕರವುಂಟಾಗುತ್ತದೆ. ನಾನಾದರೂ ಮಾಡುವುದೇನು?....ಕಾಯದೆ ದೃಷ್ಟಿಯಿಂದ ತೂಗಿ ನೋಡಿದರೆ, ನಿನ್ನ ತಂದೆಯು ತನ್ನ ಆಸ್ತಿಯನ್ನು ಬೇಕಾದ ಹಾಗೆ ವ್ಯವಸ್ಥೆ ಮಾಡಲು ಪೂರ್ಣ ಸ್ವತಂತ್ರ ಅಧಿಕಾರಿಯಾಗಿದ್ದಾನೆ. ಇದನ್ನು ಬಿಡಿಸಲು ಬೇರಾವ ಹಾದಿಯು ಇಲ್ಲವಾದರೂ ನೀನು ಇಷ್ಟೇಕೆ ಎದೆ–ಬಾಯಿ ಬಿಡುವಿ? ತಂದೆಯ ಮರಣದವರೆಗೆ ತಡೆ; ನಿನ್ನ ತಂದೆಯು ಒಂದು ವೇಳೆ ಮೃತ್ಯು

ಪತ್ರ ಮಾಡಿಟ್ಟು ಹೋಗಬಹುದು; ಅದನ್ನೇ ಉಪಾಯಗಳಿಂದ ರದ್ದು ಪಡಿಸಲು ಯತ್ನಿಸುವುದೇ ಯೋಗ್ಯ 'ವೆಂದು ಅಧಿಕಾರಿಯು ಸಾವಧಾನ ವಾಗಿ ತರುಣನಿಗೆ ತಿಳಿಯಹೇಳಿದನು.

'ಇಷ್ಟೇ ಅಲ್ಲ–ಈ ಎಲ್ಲ ಆಸ್ತಿಯನ್ನು ಎತ್ತಿಹಾಕುವ ಕೆಲವು ಕಪಟೋಕ್ತಿಗಳು ನಡೆದಿರುವವು. ತಂದೆಯನ್ನು ಮೋಸಗೊಳಿಸುವ ಕಪಟಕಾರಸ್ಥಾನವು ನಡೆದಿರುವದೆಂದು ನನಗೆ ಕಂಡುಬಂದ ಮೇಲೆ, ನಾನು ಗಾಬರಿಗೊಂಡು ತಮ್ಮೆಡೆಗೆ ಬಂದಿರುವೆನು. ಏನಾದರೂ ಮಾಡಿ ನನ್ನನ್ನು ಈ ಸಂಕಟದಿಂದ ಪಾರುಮಾಡಬೇಕು' ಎಂದು ಅಳುಮೊಗದಿಂದ ತರುಣನು ಬಿನ್ನವಿಸಿಕೊಂಡನು.

'ಕಪಟಕಾರಸ್ಥಾನವೆ! ಅದು ಹೇಗೆ ಹೇಳು, ಕೇಳುವಾ' ಎಂದು ಅಧಿಕಾರಿಯು ಹೆಚ್ಚು ಲಕ್ಷ್ಯಗೊಟ್ಟು ಕೇಳಲುದ್ಯುಕ್ತನಾದನು.

'ಇತ್ತೀಚೆ, ನಿನ್ನ ತಾಯಿಯ ದೆವ್ವವು ನನಗೆ ಕಾಣಹತ್ತಿದೆ, ನನ್ನೊಡನೆ ಮಾತಾಡಹತ್ತಿದೆ, ಮೊನ್ನೆ ಬೆಟ್ಟಿಯಾದಾಗ—ಕುಲಕಂಟಕ ನಾದ ಮಗನಿಗೆ ಒಂದಾದರೂ ಕವಡಿಯನ್ನು ಕೊಟ್ಟಿದ್ದಾದರೆ ನಿನ್ನನ್ನು ನರಕಕ್ಕೆ ಎಳೆದೊಯ್ಯುತ್ತೇನೆ. ಅವನು ಎಲ್ಲ ಧರ್ಮವನ್ನು ಬಿಟ್ಟುಬಿಟ್ಟಿ ದ್ದಾನೆ. ಆದುದರಿಂದ ಅವನಿಗೇನೂ ಆಸ್ತಿ ಕೊಡಕೂಡದೆಂದು ಹೇಳಿ ಬಿಟ್ಟಿದೆ' ಎಂದು ನಿನ್ನೆ ನನ್ನ ತಂದೆಯು ಹೇಳಿದ್ದಾನೆ. ಆದರೆ ದೆವ್ವಗಿವ್ವ ಗಳಲ್ಲಿ ನನ್ನದು ವಿಶ್ವಾಸವೇ ಇಲ್ಲ.

ಫೌಜುದಾರನು ಕೆಲಹೊತ್ತು ವಿಚಾರಮಾಡುತ್ತ 'ನಿನ್ನಂತೆ ನನ್ನ ದಾದರೂ ತೀರ ವಿಶ್ವಾಸವಿಲ್ಲ ಈ ದೆವ್ವಗಿವ್ವಗಳಲ್ಲಿ. ಹೀಗಿದ್ದು ನಾನು ಸಹಾಯ ಮಾಡುವ ಬುದ್ಧಿಯಿಂದ ಮುಂದುವರಿದು ಬಂದರೆ ಕೆಲಸವು ಕೈಗೂಡುವದೋ ಇಲ್ಲವೋ ಎಂಬ ಸಂಶಯವು ನನ್ನಲ್ಲಿ ಉತ್ಪನ್ನವಾಗಿದೆ. ಇಷ್ಟೇ ಏಕೆ? ಒಮ್ಮೊಮ್ಮೆ ನೌಕರಿಯನ್ನು ಕಳೆದುಕೊಂಡು ಮನೆ ಹಿಡಿದು ಕೂಡುವ ಹೊತ್ತು ಬಂದೀತೆಂದು ಹೆದರುತ್ತಿದ್ದೇನೆ. ಇರಲಿ, ಈಗ ನೀನು ಹೆಚ್ಚು ಪುರಾವೆಗಳನ್ನು ದೊರಕಿಸು. ನಾನೀ ಕೆಲಸವನ್ನು ಮಾಡಿಕೊಡುವೆನು. ಈ ಡಾಂಭಿಕರ ಉಚ್ಚಾಟನೆಯನ್ನು ಮಾಡಬೇಕೆಂದು

ಬಹು ದಿನದ ನನ್ನ ವಿಚಾರವೂ ಇದರಿಂದ ಸಫಲವಾಗಬಹುದು. ಇನ್ನೆಂಟು ದಿನಗಳಾದ ಮೇಲೆ ಬಾ, ಏನು ಮಾಡುವದೆಲ್ಲವನ್ನೂ ಮಾಡೋಣ' ಎಂದು ಅಧಿಕಾರಯುಕ್ತವಾಣಿಯಿಂದ ಹೇಳಿದನು.

ಹಾಗೆಯೇ ಆಗಲೆಂದು ತರುಣನು ಒಪ್ಪಿಕೊಂಡು ಹೊರಟು ಹೋದನು

ಒಂದು ತಿಂಗಳು ಕಳೆದರೂ ತರುಣನು ಮರಳಲಿಲ್ಲೆಂದು ಫೌಜು ದಾರನು ಈ ವಿಷಯವನ್ನು ಮರೆತಂತೆ ಮಾಡಿಬಿಟ್ಟಿದ್ದನು.

ಇಷ್ಟರಲ್ಲಿ ಒಂದು ದಿನ ದೀಪ ಹಚ್ಚುವ ಹೊತ್ತಿಗೆ, ತರುಣನು ಗಾಬರಿಗೊಂಡು ಓಡುತ್ತ ಫೌಜುದಾರರ ಮನೆಗೆ ಬಂದು 'ಇಂದು ಮಾತ್ರ ನಾನು ಆ ಕಪಟಕಾರಸ್ಥಾನದ ಮೂಲವನ್ನು ಗೊತ್ತು ಹಚ್ಚಿದ್ದೇನೆ. ಇನ್ನು ತಮ್ಮ ಸಹಾಯವು ಅವಶ್ಯವೆಂದು' ವಿನಯದಿಂದ ಬೇಡಿಕೊಂಡನು.

'ಶೋಧಿಸಲು ಸಾಕಷ್ಟು ಸಂಗತಿಗಳು ತಿಳಿವರೆ ಸಾಕು, ನಾನು ಕೈಲಾದಷ್ಟು ಸಹಾಯ ಮಾಡುವೆನು' ಎಂದು ಫೌಜುದಾರನು ಅಂದನು

'ಅದಕ್ಕೇನು ಕಡಿಮೆ ? ಬೇಕಾದಷ್ಟು ! ಇಂದು ನಿಮಗೆ ಬೇಕಾದಷ್ಟು ಪುರಾವೆಗಳನ್ನು ಕೊಡಬಲ್ಲೆನು. ತಾಯಿಯ ಭೂತವು ನಿಮಗೆಲ್ಲಿ ಕಂಡಿತು – ಎಂದು ಮೊದಲು ತಂದೆಯನ್ನು ನಾನು ವಿಚಾರಿಸಿದೆನು. ಅದು ಮನೆಯಲ್ಲಿ ಕಾಣಿಸಿಕೊಳ್ಳುವದಿಲ್ಲ, ಅವಳನ್ನು ಹುಗಿದ ಸ್ಥಳದಲ್ಲಿ ಅದು ಕಾಣುವದು, ಎಂದು ತಂದೆಯಿಂದ ತಿಳಿದುಬಂತು. ಮೊದಲು ಈ ಸುದ್ದಿಯನ್ನು ಹೇಳಿದ ನೌಕರನೇ 'ನಿನ್ನ ತಂದೆಯು ಜಾನ್ ಎಂಬ ಧರ್ಮ ಗುರುವಿನೊಡನೆ ಒಂದೆರಡು ಸಲ ರಾತ್ರಿ ಹೋದುದನ್ನೂ, ಮತ್ತು ಎರಡೂ ಸಲ ಅವರು ಮರುದಿನ ನಸುಕಿನಲ್ಲಿ ಮರಳಿ ಬಂದುದನ್ನೂ ನೋಡಿದ್ದೇನೆ. ಅವರು ತಿರುಗಿ ಬಂದಾಗ ಬಹಳ ಅಂಜಿದವರಂತೆ ಕಾಣಿಸುತ್ತಿದ್ದರು. ಬಂದ ಕೂಡಲೇ ಅವರು ಮನೆಯಲ್ಲಿ ತಾಯಿಯ ಹೆಸರಿನಿಂದ ಶಾಂತಿಯನ್ನು ಮಾಡಿದರು. ಇಂದಿನ ರಾತ್ರಿ ಅವರಲ್ಲಿಗೆ ಹೋಗುವವರಿದ್ದಾರೆ' ಎಂದು ಹೇಳಿದನು. ಇಂದು ಮಾತ್ರ ಈ ಗುಪ್ತಕಾರಸ್ಥಾನದ

ಮೂಲವನ್ನು ಗೊತ್ತುಹಚ್ಚಲು ಒಳ್ಳೇ ಅನುಕೂಲವಿದೆ. ಸಾಮಾನ್ಯ ಮನುಷ್ಯನಾದ ನನಗೆ ದೊಡ್ಡವರಾದ ತಾವು ಇಂದು ಶ್ರಮಬಟ್ಟು ಬಂದು ಸಹಾಯಮಾಡಿದ್ದಾದರೆ ನಾನೆಂದಿಗೂ ತಮಗೆ ಋಣಿಯಾಗಿರುವೆ....'

'ಕೆಲಸ ಕೈಕೊಂಡ ಹೊತ್ತಿನಲ್ಲಿ ಸಣ್ಣ ಮತ್ತು ದೊಡ್ಡ ಎಂಬ ಭೇದಭಾವವನ್ನು ನಾನು ಮನಸ್ಸಿನಲ್ಲಿ ಎಂದೂ ತರುವದೇ ಇಲ್ಲ. ಈಗ ಮಾತ್ರ ನಾನು ಈ ಕೆಲಸಕ್ಕೆ ನೆರವಾಗಲು ಬರುವೆನು. ಮೊದಲು ನೀನು ಬಂದಾಗ ಸಾಕಷ್ಟು ಪುರಾವೆಗಳು ಹೊರಟದ್ದಿಲ್ಲೆಂದು ಆಗ ನಾನು ನಂಬಲಿಲ್ಲ. ಎಷ್ಟೋ ಜನರು ಅರ್ಧಮರ್ಧ ಪುರಾವೆಗಳ ಮೇಲಿಂದ ಕೆಲಸ ಮಾಡಿಸಿಕೊಳ್ಳಲು ನನ್ನೆಡೆಗೆ ಬರುತ್ತಾರೆ. ಅಂಥವರನ್ನು ಒಮ್ಮೆಲೆ ನಂಬುವುದು ಹೇಗೆ ? ನಿನ್ನದು ಈಗ ಹಾಗಲ್ಲ. ಇದೊ ! ಈಗ ಎಂಟು ಬಡಿದಿದೆ; ಇನ್ನು ಎರಡು ತಾಸಿನ ನಂತರ ನೀನು ನನ್ನ ಕಚೇರಿಯ ಕಡೆಗೆ ಬಂದು ಬಿಡು. ಈ ವಿಷಯವಾಗಿ ಯಾರ ಮುಂದೆಯೂ ಒಂದು 'ಚ' ಕಾರ ಶಬ್ದವನ್ನೂ ತೆಗೆಯದಂತೆ ನೀನು ಎಚ್ಚರದಿಂದಿರಬೇಕು. ಉಳಿದೆಲ್ಲ ಕಾರ್ಯ ಭಾರವನ್ನು ನನಗೊಪ್ಪಿಸಿ ನೀನು ನಿಶ್ಚಿಂತನಾಗಿರು' ಎಂದು ನಡುವೆಯೇ ಫೌಜುದಾರನು ತರುಣನಿಗೆ ಹೇಳಿದನು.

ರಾತ್ರಿ ಹತ್ತೂವರೆ ಗಂಟೆಗೆ, ಒಂದು ಗಾಡಿಯಲ್ಲಿ ನಾಲ್ವರು ಕುಳಿತು ಪೋಲೀಸ್ ಕಚೇರಿಯಿಂದ ಹೊರಟು ಆ ಸ್ಥಳದ ಕಡೆಗೆ ಗಾಡಿಯನ್ನು ಹೊಡೆಯಿಸಿದರು. ಆ ಸ್ಥಳವು ಊರ ಹೊರಗೆ ಸಮೀಪದಲ್ಲಿಯೇ ಇದ್ದಿತು. ಹದಿನೈದು ಇಪ್ಪತ್ತು ನಿಮಿಷಗಳಲ್ಲಿ ಗಾಡಿಯು ಆ ಸ್ಥಳಕ್ಕೆ ಬಂದಿತು. ನಾಲ್ವರೂ ಕೆಳಗಿಳಿದರು. ಅವರಲ್ಲಿ ಇಬ್ಬರೆ ಹೊಸಬರು— ಒಬ್ಬನು ಜಮಾದಾರ, ಇನ್ನೊಬ್ಬ ಗುಪ್ತ ಪೋಲೀಸಿನವನು.

'ನಾವು ಈ ಸ್ಥಳವನ್ನು ಮೊದಲಿಗೇ ನೋಡಿಟ್ಟುಕೊಂಡಿರುವದು ಒಳಿತು. ಈಗ ೧೧ ಗಂಟೆ. ಇಲ್ಲಿಗೆ ಆ ಜನರು ಬರಲಿಕ್ಕೆ ಇನ್ನೂ ಒಂದೂವರೆ ಅಥವಾ ಎರಡು ತಾಸು ಬೇಕು. ಅಷ್ಟರಲ್ಲಿ ನಾವು ನಮ್ಮ ನಿಶ್ಚಿತ ಸ್ಥಳಗಳನ್ನೂ ಸಂಕೇತಗಳನ್ನೂ ಗೊತ್ತುಮಾಡಿಕೊಂಡು ಸಿದ್ಧರಾಗ ಬೇಕು' ಎಂದು ಫೌಜುದಾರನು ಮೂವರಿಗೂ ಹೇಳಿದನು.

ನಾಲ್ವರೂ ಸ್ಮಶಾನಕಟ್ಟೆಯಲ್ಲಿ ಒಳಹೊಕ್ಕರು. ಎಲ್ಲೆಲ್ಲಿಯೂ

ಗಂಭೀರ ಶಾಂತತೆ ನೆಲೆಸಿತ್ತು ಹುಳ-ಹುಪ್ಪಡಿಗಳ ಶಬ್ದವೂ ಇರಲಿಲ್ಲ ಅಲ್ಲಿ ಕಾವಲುಗಾರನ ಸಣ್ಣಮನೆ, ಒಂದು ಸಣ್ಣ 'ಚರ್ಚು'. ಅವೆರಡಕ್ಕೂ ಕೀಲಿಹಾಕಿದ್ದವು.

ಗುಪ್ತ ಪೋಲೀಸಿನವನು 'ಸ್ಮಶಾನದ ಕಾವಲುಗಾರನು ಮನೆಯಲ್ಲಿದ್ದ ಸುಳಿವು ಕಾಣಬರುವುದಿಲ್ಲ. ಆ ಜನರು ಕಾವಲುಗಾರನನ್ನು ಮೋಸಗೊಳಿಸಿ ಇಲ್ಲಿ ಇರದಂತೆ ಮಾಡಿರಬೇಕು' ಎಂದನು. ಫೌಜುದಾರನು 'ನಿನ್ನ ತಾಯಿಯನ್ನು ಹುಗಿದ ಸ್ಥಳವಾವುದು?' ಎಂದು ತರುಣನನ್ನು ತೀರ ಮೆತ್ತಗಿನ ದನಿಯಿಂದ ವಿಚಾರಿಸಿದನು.

ಸಮೀಪದಲ್ಲಿರುವ ಗಿಡದ ಕೆಳಗೆ ಕಾಣುವ ಸಮಾಧಿಯ ಕಡೆಗೆ ತರುಣನು ಬೊಟ್ಟುಮಾಡಿ ತೋರಿಸಿದನು. ಆ ಸ್ಥಳವು ಅಡಗಿಕೊಂಡು ನಿಲ್ಲಲು ಯೋಗ್ಯವಿಲ್ಲೆಂದು ಗುಪ್ತಪೋಲೀಸನು ಸೂಚಿಸಿದನು. ಆ ಗಿಡವು ತೀರ ಚಿಕ್ಕದಾಗಿದ್ದುದರಿಂದ ಸಮೀಪದಲ್ಲಿ ಮರೆಯಾಗಿ ನಿಲ್ಲಲು ಯಾವ ಅನುಕೂಲವೂ ಇರಲಿಲ್ಲ. ಏನು ಮಾಡಬೇಕೆಂಬ ಪ್ರಶ್ನಾರ್ಥಕ ದೃಷ್ಟಿಯನ್ನು ಫೌಜುದಾರನ ಗುಪ್ತಪೋಲೀಸನ ಕಡೆಗೆ ಬೀರಿದನು.

'ಕಾವಲುಗಾರನ ಮನೆಯಲ್ಲಿ ಈ ಗುಡಿಯ ಕೀಲೀಕೈಯ್ಯಿರಬೇಕು. ಹೇಗಾದರೂ ಮಾಡಿ ಮೊದಲು ಅದನ್ನು ದೊರಕಿಸಬೇಕು' ಎಂದು ಗುಪ್ತ ಪೋಲೀಸನು ಕಿವಿಯಲ್ಲಿ ಹೇಳಿದನು.

ಕೂಡಲೇ ಎಲ್ಲರೂ ಆ ಮನೆಯ ಕಡೆಗೆ ಹೊರಳಿದರು. ಬಾಗಿಲನ್ನು ನೂಕುವದರಿಂದ ಬಾಗಿಲು ತೆರೆಯಲಿಲ್ಲ. ಕೆಲಹೊತ್ತು ಗುದುಮುರಿಗೆ ಹಾಕಿದ ಮೇಲೆ ಬಾಗಿಲು ತೆಗೆಯಲಾರದೆಂದು ಕಂಡುಬಂದಿತು. ಆ ಮೇಲೆ 'ಈ ಕಿಡಿಕಿಯನ್ನು ಮುರಿದು ಒಳಹೊಕ್ಕು ಕೀಲೀ ಕೈಯನ್ನು ತರದ ಹೊರತು ಗತಿಯಿಲ್ಲ' ಎಂದು ಗುಪ್ತಪೋಲೀಸನೆಂದನು. ಕೂಡಲೇ ಜಮಾದಾರನು ಅದರಂತೆಯೇ ಮಾಡಿಬಿಟ್ಟನು.

ಮುಂದಿನ ಹಂಚಿಕೆಗಳು ಗೊತ್ತು ಮಾಡಲ್ಪಟ್ಟವು ಫೌಜುದಾರ ಮತ್ತು ತರುಣ ಇಬ್ಬರೂ ಗುಡಿಯೊಳಗೆ ಅವಿತುಕೊಂಡರು. ಜಮಾದಾರನು ಮೊದಲಿನಂತೆ ಕೀಲೀ ಹಾಕಿ ಕೈಯನ್ನು ಮೊದಲಿದ್ದ ಸ್ಥಳದಲ್ಲಿಯೇ ಇರಿಸಿದನು. ಇಬ್ಬರೂ ಒಂದು ತೆಗ್ಗಿನಲ್ಲಿ ಮರೆಯಾಗಿ ಕುಳಿತರು.

ಸುತ್ತಲೂ ನಿಶ್ಯಬ್ದ. ದೇವಾಲಯದೊಳಗಿಂದ ಹನ್ನೆರಡರ ಗಂಟೆಯು ಸುತ್ತಿನ ವಾತಾವರಣವನ್ನು ನಾದಮಯವಾಗಿಸಿಬಿಟ್ಟಿತು ಗಂಟೆಯ ನಾದವು ಅಡಗಿದ ಮೇಲೆ ಗಾಡಿಯ ಬದಿಗೆ ಕಾಲು ಸಪ್ಪಳವು ಕೇಳ ಹತ್ತಿತು.

ಇತ್ತ ದೇವಾಲಯದೊಳಗೆ ಕತ್ತಲುಗವಿಯಲ್ಲಿ ತರುಣನೂ ಅಧಿಕಾರಿಯೂ ಮುಂದಿನ ಚಿಂತೆಯಲ್ಲಿ ಮಗ್ನರಾಗಿದ್ದರು. ಎದೆಯು ಧಡಧಡ ಹಾರುತ್ತಿತ್ತು ಕತ್ತಲೆಯಲ್ಲಿ ತಾವಾರಿಗೂ ಕಾಣಲಿಕ್ಕಿಲ್ಲೆಂದು ಬಗೆದು ಕುಳಿತುಕೊಂಡನು.

ಹೊರಗಿನ ಕೀಲಿಯು ತೆಗೆದ ಸಪ್ಪಳವಾಯಿತು. ಕೂಡಲೇ ಇಬ್ಬರೂ ಕಪಾಟಿನ ಹಿಂಬದಿಯಲ್ಲಿ ಅಡಗಿಕೊಂಡರು. ಅಷ್ಟರಲ್ಲಿ ಬಾಗಿಲ ತೆಗೆದು ಇಬ್ಬರು ಒಳಗೆ ಬಂದರು. ಒಬ್ಬ—ಧರ್ಮಗುರುವಾದ ಜಾನನು. ಇನ್ನೊಬ್ಬನು ತರುಣನ ತಂದೆ-ಮುಪ್ಪಿನ ಮುದುಕನು. ತಂದೆಯ ಮುಖಚರ್ಯೆಯು ಚಿಂತಾಕ್ರಾಂತವಾಗಿದ್ದಂತೆ ತೋರುತ್ತಿತ್ತು.

ಜಾನನು ಬೀಸು ಆಳು. ತೀಕ್ಷ್ಣವಾದ ಕಣ್ಣುಗಳಲ್ಲಿ ತೇಜವು ಒಡೆದು ಕಾಣುತ್ತಿತ್ತು. ಅವನ ಕೈಯಲ್ಲಿ ಒಂದು ಸಣ್ಣ ಮಾಡಿದ ಕಂದೀಲು. ಜಾನನು ಒಳಗೆ ಬಂದವನೆ ಎರಡು ಮೇಣಬತ್ತಿಗಳನ್ನು ಹಚ್ಚಿ, ಗಂಭೀರ ಸ್ವರದಿಂದ ಗತಿಸಿಹೋದವರ ಕಲ್ಯಾಣಚಿಂತನೆಯ ಪ್ರಾರ್ಥನೆಗೆ ಮೊದಲು ಮಾಡಿದನು. ತರುಣನ ತಂದೆಯು ಸಮೀಪದಲ್ಲಿಯೇ ಕುಳಿತು ಧರ್ಮಗುರುವಿಗೆ ನೆರವಾಗಿದ್ದಾನೆ.

ಪ್ರಾರ್ಥನೆಯು ಮುಗಿಯಿತು. ಗುರುವು ಒಂದು ಕೈಯಲ್ಲಿ ಬಾಯ್‌ಬಲ್ಲನ್ನೂ, ಇನ್ನೊಂದರಲ್ಲಿ ನೀರು ತುಂಬಿದ ಗಿಂಡಿಯನ್ನೂ ತೆಗೆದುಕೊಂಡನು ಕಂದೀಲು ತೆಗೆದುಕೊಂಡು ಮುದುಕನು ಮುಂದೆ ಮುಂದೆ ಸಾಗಿದನು. ಇಬ್ಬರೂ ಸಮಾಧಿಯ ಬಳಿಗೆ ಬಂದರು.

ಅವರಿಬ್ಬರೂ ಗುಡಿಯೊಳಗಿಂದ ಹೊರಬಿದ್ದುದನ್ನು ತಿಳಿದು ಒಳಗಿನವರಿಬ್ಬರೂ ಮೆಲ್ಲಗೆ ಮುಂದೆ ಬಂದರು. ಸಮೀಪದ ಕಿಟಕಿಯಿಂದ ಸಮಾಧಿಯ ಕಡೆಗೆ ಉಸಿರು ಗಟ್ಟಿಹಿಡಿದು ಹೊರಗೆ ಕಣ್ಣಿಟ್ಟು ನಿಂತರು.

ಮುದುಕನೂ, ಜಾನನೂ ಆ ಸಮಾಧಿಗೆ ಮೂರು ಸಲ ಪ್ರದಕ್ಷಿಣೆ

ಹಾಕಿದರು. ಸಮಾಧಿಯ ಮುಂದೆ ಪೂರ್ವದಿಕ್ಕಿನ ಕಡೆಗೆ ಮುಖನಾಡಿ ಕೊಂಡು ನಿಂತರು. ಜಾನನು ಬಾಯುಬಲ್ಲನ್ನು ತೆಗೆದು ಕೆಲವು ಭಾಗವನ್ನು ಗಟ್ಟಿಯಾಗಿ ಓದಿದನು. ಓದುವದಾದ ಮೇಲೆ ಗಿಂಡಿಯೊಳಗಿನ ನೀರನ್ನು ಮೂರು ಸಲ ಸಮಾಧಿಯ ಮೇಲೆ ಪ್ರೋಕ್ಷಿಸಿದನು. ತಿರುಗಿ ದೇವಾಲಯದ ಕಡೆಗೆ ಹೊರಟು ಬಂದು, ಮೆಟ್ಟುಗಟ್ಟಿಯ ಮೇಲೆ ನಿಂತು, ಒಮ್ಮೆಲೆ ಉಚ್ಚ ಸ್ವರದಿಂದ ಮತ್ತೆ ಪ್ರಾರ್ಥನೆಗೆ ಸುರುವು ಮಾಡಿದನು.

ಪ್ರಾರ್ಥನೆ ಅನ್ನುತ್ತನ್ನುತ್ತ ಆವನ ಸ್ವರವು ತೀರ ಬದಲಾಗಹತ್ತಿತು. ಶ್ವಾಸೋಚ್ಛ್ವಾಸವು ಒಳ್ಳೇ ಜೋರಿನಿಂದ ನಡೆಯಿತು. ನಡುಗುವ ಧ್ವನಿಯಿಂದ ಗಟ್ಟಿಯಾಗಿ 'ಏಳು ! ಏಳು !' ಎಂದು ಕೂಗಿಕೊಂಡನು.

ಅವನ ಬಾಯಿಂದ ಈ ಶಬ್ದಗಳು ಪೂರ್ಣ ಹೊರಬಂದವೋ ಇಲ್ಲವೋ ಎನ್ನುವಷ್ಟರಲ್ಲಿ ಸಮಾಧಿಯಿಂದ ಒಂದೇಸವನೆ ಹೊಗೆಯು ಭಸ್‌ಭಸ್ ಎಂದು ಬರತೊಡಗಿತು. ಸುತ್ತುಮುತ್ತೆಲ್ಲ ಹೊಗೆಯು ಮುಚ್ಚಿ ಬಿಟ್ಟಿತು. ಹೊಗೆಯಲ್ಲಿ ಒಂದು ಬಿಳಿದಾದ ಆಕಾರವು ಕಾಣಹತ್ತಿತು. ಬಿಳೀ ಬಟ್ಟೆಯನ್ನುಟ್ಟ ಸ್ತ್ರೀ ವ್ಯಕ್ತಿಯೊಂದು ಸಮಾಧಿಯ ಬಳಿಯಲ್ಲಿ ನಿಂತಂತೆ ಸ್ಪಷ್ಟವಾಗಿ ಕಂಡಿತು.

'ನಿನ್ನ ಹೆಸರೇನು ?' ಎಂದು ಧರ್ಮಗುರುವು ಗಂಭೀರ ಧ್ವನಿಯಿಂದ ಆ ಆಕೃತಿಗೆ ಪ್ರಶ್ನೆಮಾಡಿದನು.

'ಮೃತ್ಯುಲೋಕದಲ್ಲಿ ಮಾನವ ಶರೀರಧಾರಿಯಾದಾಗ ನನಗೆ 'ಅನಾಮರಾಯಾ' ಎಂದು ಹೆಸರಿತ್ತು' ಎಂಬ ಗೊಗ್ಗರ ಧ್ವನಿಯ ಉತ್ತರವು ಕೇಳಬಂದಿತು.

'ನಾವು ಕೇಳುವ ಎಲ್ಲ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಕೊಡಬಲ್ಲೆಯಾ ?' ಎಂದು ಜಾನನು ಪುನಃ ಪ್ರಶ್ನೆ ಮಾಡಿದನು.

'ಶಕ್ಯವಿದ್ದಷ್ಟು' ಎಂದು ಉತ್ತರ ಬಂದಿತು.

'ನಿನ್ನ ಆತ್ಮದ ಕಲ್ಯಾಣಾರ್ಥವಾಗಿ ನಾನು ಮಾಡಿದ ಪ್ರಾರ್ಥನೆಯ ಫಲವಾಗಿ, ನೀನು ನರಕದಿಂದ ಮುಕ್ತಳಾಗಿರುವೆಯಾ ?'

'ಇನ್ನೂ ಇಲ್ಲ; ಆದರೆ ಬೇಗ ಆಗಬಲ್ಲೆ.'

'ಎಂದಿಗೆ ?'

‘ ನನ್ನ ಧರ್ಮಲಂಡ, ಕುಲಕಂಟಕ ಮಗನಿಗೆ ಎಂದು ಶಾಸನವಾಗುವದೋ—ಅಂದೇ ನಾನು ಈ ಯಾತನೆಯಿಂದ ಮುಕ್ತಳಾಗುವೆನು ’

‘ ನಾನು ಅವನಿಗೆ—ಆ ಮೂರ್ಖನಿಗೆ— ಎಂದೋ ಶಿಕ್ಷಿಸಿದ್ದೇನೆ. ನಿನ್ನ ಯಜಮಾನರು ಒಂದು ಒಡಕ ಕವಡಿಯನ್ನು ಸಹ ಕೊಡದೆ ತನ್ನೆಲ್ಲ ಆಸ್ತಿಯನ್ನು ನಮ್ಮ ಧರ್ಮೋನ್ನತಿಗಾಗಿ ಕೊಟ್ಟುಬಿಟ್ಟಿದ್ದಾರೆ. ’

‘ಅದಷ್ಟರಿಂದೇನಾದೀತು ? ನನ್ನ ಯಜಮಾನರು ಮಗನಿಗೆ ಏನೂ ಕೊಡದೆ ಧರ್ಮಾಧಿಕಾರಿಗಳಾದ ನಿಮ್ಮ ಹೆಸರಿನಲ್ಲಿ ಮೃತ್ಯುಪತ್ರವನ್ನು ಮಾಡಿ, ಸರಕಾರದಲ್ಲಿ ರಜಿಸ್ಟರು ಮಾಡಿಸಬೇಕು. ಮಗನನ್ನು ಮನೆಬಿಟ್ಟು ಹೊರದೂಡಬೇಕು. ’

ಸ್ವಲ್ಪ ಗಾಬರಿಗೊಂಡವನಂತೆ ನಟಿಸಿ, ಜಾನನು ‘ ಏನು ಅನ್ನುವಿ ? ನೀನಂದಂತೆ ಮಾಡಿಸಲೇಬೇಕೆ ? ’

‘ ಹೌದು, ಇಲ್ಲದಿದ್ದರೆ ನರಕವು ನನಗೆ ತಪ್ಪಿದ್ದಲ್ಲ. ಆದುದರಿಂದ ನಾನು ಬೇಗ ಮುಕ್ತಳಾಗಬೇಕೆಂಬ ಸದಿಚ್ಛೆ ನಿಮ್ಮದಿದ್ದರೆ, ನಾನು ಅಂದಂತೆ ಆ....ಗ....ಲೇ....ಬೇ....ಕು....’

ಹೀಗೆ ನುಡಿದು ಆಕೃತಿಯು ಕರ್ಕಶಧ್ವನಿಯಿಂದ ಕಿರಿಚಿತು. ಬಂದ ಮಾರ್ಗದಿಂದ ಹೊಗೆಯಲ್ಲಿ ಅದೃಶ್ಯವಾಗುವುದು ಬಿಟ್ಟು, ಅದು ಸ್ಮಶಾನದಿಂದ ವೇಗವಾಗಿ ಓಡತೊಡಗಿತು. ಅದೇ ಹೊತ್ತಿಗೆ ಸಿಳ್ಳಿನಮೇಲೆ ಸಿಳ್ಳುಗಳಾದುವು.

ಫೌಜುದಾರನು ದೇವಾಲಯುದಿಂದ ಹೊರಬಂದು ಜಾನನ ಹೆಗಲ ಮೇಲೆ ಕೈಯನ್ನಿಟ್ಟು ಶಾಂತರೀತಿಯಿಂದ ಹೀಗೆಂದನು :—

‘ ನೀನು ನನ್ನ ಸೆರೆಯಾಳು. ಇಲ್ಲದ ಗಡಿಬಿಡಿಯನ್ನು ಮಾಡದಿರು. ಪಾರಾಗಿ ಹೋಗುವುದು ನಿರರ್ಥಕ.’

ಅತ್ತ ಗುಪ್ತಪೋಲೀಸನೂ ಜಮಾದಾರನೂ ಓಡಿ ಹೋಗಿ ದೆವ್ವವನ್ನು ಹಿಡಿದು, ದರದರ ಎಳೆಯುತ್ತ ದೇವಾಲಯಕ್ಕೆ ಬಂದರು.

ಹೊದ್ದುಕೊಂಡ ಬಿಳೀ ಬಟ್ಟೆಯನ್ನು ಕಸಿಯಲು, ಆ ದೆವ್ವವು ಆ ದೇವಾಲಯದ ಕಾವಲುಗಾರನಾಗಿ ಕಂಡುಬಂದನು. ಆನಾಮರಾಯಳಂತೆ ಆ ಬಟ್ಟೆಯ ಮೇಲೆ ಚಿತ್ರವನ್ನು ಬರೆದು ಅವನಿಗೆ ಹೊದಿಸಿದ್ದರು.

ಆ ಕ್ಷಣವೆ ತಂದೆಯ ಮತ್ತು ಮಗನ ಮನಸ್ಸುಗಳು ಮೊದಲಿನಂತೆ ಒಂದಾದುವು. ಯಾವ ತೊಂದರೆಗಳೂ ಉಳಿಯಲಿಲ್ಲ. ತಂದೆಗೆ ನಮಸ್ಕರಿಸಿ ಮಗನು ಅಂದನು: 'ಅಪ್ಪಾ! ಇಂಥ ಜೀವಂತ ಪಿಶಾಚಿಗಳಲ್ಲಿ ನನ್ನ ವಿಶ್ವಾಸವಿದ್ದಿಲ್ಲ. ಇನ್ನಾದರೂ ನನಗೆ 'ನಾಸ್ತಿಕಶಿರೋಮಣಿ'ಯೆಂದು ಕರೆಯಲಿಕ್ಕಿಲ್ಲವಷ್ಟೆ?'

'ಛೀ, ಎಂದಿಗೂ ಇಲ್ಲ, ಮಗೂ. ನಾನಿನ್ನು ಎಂದಾದರೂ ಇಂಥ ವಂಚಕತನವನ್ನು ನಂಬಬಹುದೇ? ನಂಬದಿದ್ದ ಮಾತ್ರಕ್ಕೇನೇ ನಾನೇನೂ ನಾಸ್ತಿಕನಾಗುವದಿಲ್ಲ' ಎಂದು ತಂದೆಯು ನಗೆಯಾಡುತ್ತ ಹೇಳಿದನು

'ಧರ್ಮನಾಶಕರು' ತನ್ನ ಮೇಲೆ ಇಲ್ಲದ ಸಲ್ಲದ ಆರೋಪಗಳನ್ನು ಹೊರಿಸಿ ಈ ಜಗದ ಜಂಜಾಲದ ಮೋಹಪಾಶದಲ್ಲಿ ತನ್ನನ್ನು ಕೆಡವಬಹುದೆಂದು ಎಚ್ಚೆತ್ತು, ಗುರುಮಹಾರಾಜರು ಪ್ಯಾರಿಸ್ ಪಟ್ಟಣದಿಂದ ಒಮ್ಮಿಂದೊಮ್ಮೆ ಎಲ್ಲಿಗೋ ಕಾಲ್ತೆಗೆದರು.

ಅವರು ಬಹು ದೂರವಿರುವ ಒಂದು ಚಿಕ್ಕ ಹಳ್ಳಿಯಲ್ಲಿ ಒಂದು ಚಿಕ್ಕದಾದರೂ ಚೊಕ್ಕಟವಾದ, ಹಾಳಾದ ಮಠವೊಂದರಲ್ಲಿ ಧರ್ಮಾಂಧಭಾಸ್ಕರ ಗುರುಮಹಾರಾಜರಾಗಿ ನೆಲೆಸಿದರೆಂದು ಹಿಂದುಗಡೆಯಿಂದ ತಿಳಿದು ಬಂದಿತು. ಶಾಂತರೀತಿಯಿಂದ ಕಾಲಕ್ಷೇಪಮಾಡಿ, ಜಗತ್ತಿನ ಕಲ್ಯಾಣವಾಗಲೆಂದು ತಪಶ್ಚರ್ಯವನ್ನು ಆರಂಭಿಸಿದ್ದೇವೆ ಎಂದು ಜಾಹೀರು ಪಡಿಸಿದ್ದರೆಂಬ ಕೇಳಿಕೆಯ ಮಾತು ಎಲ್ಲರ ಕಿವಿಯವರೆಗೂ ಬಂದಿತ್ತು. ಅದು ರಮ್ಯಸ್ಥಳವಾದುದರಿಂದ ತಪಶ್ಚರ್ಯೆಗೆ ಒಳ್ಳೆ ಅನುಕೂಲವಾಗಿಯೇ ಇತ್ತು. ಸಮೀಪದಲ್ಲಿ ಒಂದು ಸರೋವರ, ಅದರ ಸುತ್ತಲೂ ಹಣ್ಣು-ಹಂಪಲ ಹೂಗಳಿಗೆ ತವರುಮನೆಯಾದ ತೋಟವೊಂದು ನಿರ್ಮಿತವಾಗಿದೆ. ಈಗ ಈ ಮಠದಲ್ಲಿ ಗುರುಧರ್ಮಸೇವಾವೃತ್ತಿಯನ್ನು ಕೈಕೊಂಡಂಥ ಅನೇಕ ಶಿಷ್ಯ, ಪ್ರತಿಶಿಷ್ಯರೂ ಬಂದು ನೆಲೆಸಿದ್ದಾರೆಂದು ಅಲ್ಲಿಂದ ಬಂದವರೊಬ್ಬರು ಪ್ಯಾರಿಸ್ ಪಟ್ಟಣದಲ್ಲಿ ಸುದ್ದಿಯನ್ನು ಬೀರಿದರು.

---

# ಸೋಡಚೀಟಿ

ಎಂ. ಬೊಂಟ್ರ್ಯಾಮನು ಪ್ಯಾರಿಸದಲ್ಲಿಯ ಬಲು ಹೆಸರಾದ ವಕೀಲನು. ಹತ್ತು ವರುಷಗಳಿಂದ ವಕೀಲಿ ಮಾಡುತ್ತ ಬಂದಿದ್ದನು. ಸೋಲೆಂಬುದು ಅವನಿಗೆ ಗೊತ್ತೇ ಇರಲಿಲ್ಲ. ಸೋಡಪತ್ರಗಳ ಖಟ್ಲೆಯಲ್ಲಂತೂ ಅವನದು ಎತ್ತಿದ ಕೈ. ಪಮನಾಗಿ ಬೆಸುಗೆ ಹೊಂದದ ಜೋಡಿಗಳ ವ್ಯಾಜ್ಯಗಳು ಅವನನ್ನು ಬಿಟ್ಟು ಇನ್ನಾರಿಗೂ ದಕ್ಕುತ್ತಿರಲಿಲ್ಲ. ಒಂದು ದಿನ ಅವನು ತನ್ನ ಕಚೇರಿಯ ಕೋಣೆಯಲ್ಲಿ ಕಾಗದ-ಪತ್ರಗಳನ್ನು ನೋಡುತ್ತ ಕುಳಿತುಕೊಂಡಿದ್ದನು. ಆದಾರೋ ಒಬ್ಬರು ಬಾಗಿಲನ್ನು ತೆರೆಯುತ್ತ ಒಳಬಂದರು. ಪಕ್ಷಕಾರರಿರದೆ ಬೇರಿನ್ನಾರಿರಬೇಕು !

ಒಬ್ಬ ಹೊಸ ಪಕ್ಷಕಾರ. ಗಟ್ಟಿಮುಟ್ಟಿಯಾದ ದೇಹ ನಡು ಎತ್ತರ. ಕೆಂಜಗದ ಮುಖ ದಟ್ಟವಾದ ಕಲ್ಲೀಮೀಸೆ ವಕೀಲನನ್ನು ಕಂಡೊಡನೆ ಅವನು ವಿನಯದಿಂದ ನಮಸ್ಕರಿಸಿದನು.

‘ ಕುಳಿತುಕೊಳ್ಳಿರಿ ’ ಎಂದು ವಕೀಲರು ಹೇಳಿದರು. ಪಕ್ಷಕಾರನು ಕುಳಿತುಕೊಂಡನು. ‘ ನನ್ನದೊಂದು ಖಟ್ಲೆಯಿದೆ. ಅದನ್ನು ತಾವು ನಡೆಯಿಸಬೇಕು ’ ಎಂದು ಕೆಮ್ಮುತ್ತ ಮಾತನಾಡಿದನು.

‘ ಓಹೋ ಆಗಬಹುದು. ಖಟ್ಲೆ ಏನು ? ಕಾಗದಪತ್ರ ತಂದಿರುವಿರಾ? ಅಂ....ಮತ್ತ....ಫೀ.... ’ ಎಂದು ವಕೀಲರು ವಿಚಾರಿಸಿದರು.

‘ ನಾನೊಬ್ಬ ಪೆನ್‌ಶನ್‌ದಾರನು. ನೊಂದಣೀ ಕಚೇರಿಯಲ್ಲಿ ಕಾರಕೂನನಾಗಿದ್ದೆ. ’

‘ ಈಗಾಗಲೇ ಪೆನ್‌ಶನ್ ತೆಗೆದುಕೊಂಡಿರಾ ? ’

‘ ಹೌದು, ಈಗಾಗಲೇ. ನನಗೆ ವಯಸ್ಸು ಆದಂತೆ ಕಾಣುವದಿಲ್ಲ. ಶರೀರ ಚಲೋ ಇದೆ! ’

‘ ಹೂಂ, ಮುಂದೆ? ’

‘ ನನ್ನ ಮದುವೆಯಾಗಿದೆ. ಅದರ ತೊಡಕಿಗಾಗಿ ಗೋಳಾಡುತ್ತಿದ್ದೇನೆ ಈ ಹಾಳು ಮದುವೆಗಾಗಿ ಜೀವ ಬೇಸತ್ತು ಹೋಗಿದೆ. ’

'ಈ ರೀತಿ ತೊಂದರೆಗೀಡಾದ ಜನರಲ್ಲಿ ನೀವೂ ಒಬ್ಬರು. ನಿಮ್ಮಂತಹ ಸಾವಿರಾರು ಜನರನ್ನು ನಾನು ನೋಡಿದ್ದೇನೆ.'

'ಹೌದು. ಇದ್ದಾರೆಂದು ಕೇಳಿದ್ದೇನೆ. ಪಾಪ! ಅವರೂ ನನ್ನಂತೆ ಗೋಳಾಡುತ್ತಿರಬಹುದು. ಆದರೆ ನನ್ನದು ಅತಿ ವಿಚಿತ್ರವಾಗಿದೆ. ನನ್ನ ಹೆಂಡತಿಯ ಬಗ್ಗೆ ಇರುವ ನನ್ನ ತಕರಾರುಗಳು ಮುಚ್ಚ ಮರೆಯವು ಇವೆ. ತೀರ ಮೊದಲಿನಿಂದಲೇ ಹೇಳಿದರೆ ತಮಗೆ ಸ್ಪಷ್ಟವಾಗುವದು. ಹೊಸ ಹಾದಿಯಿಂದ ನಾನು ಅವಳನ್ನು ಮದುವೆಯಾದೆ. ಮದುವೆಯಾದ ವೇಳೆ ಸುಖಿಯಾಗಬಹುದೆಂದೆಣಿಸಿದ್ದೆ. ಆದರೆ......................... ಅದ್ಭುತರಮ್ಯಕಲ್ಪನೆಗಳಲ್ಲಿ ನಿಮಗೆ ನಂಬಿಗೆಯಿದೆಯೋ?'

'ಹಾಗೆಂದರೇನು?'

'ದೇಹಕ್ಕೆ ವಿಷವಿದ್ದ ಹಾಗೆ ಮನಸಿಗೆ ಕೆಲವು ವಿಚಾರಗಳು ಭೀತಿ ಗ್ರಸ್ತವಿರುವವೆಂದು ನೀವು ನಂಬುವದಿಲ್ಲವೇ'?

'ಹೂಂ; ಹೌದು, ಇರಬಹುದು.'

'ಅದೇಕೆ ನಿಶ್ಚಯವಾಗಿಯೂ ಕೆಲವೊಂದು ವಿಚಾರಗಳು ಇರುತ್ತವೆ. ಅವು ತಲೆಯಲ್ಲಿ ಸೇರಿ ತಲೆ ಕೆಡಿಸುತ್ತವೆ. ಅಂಥವುಗಳನ್ನು ಹೊಡೆದೋಡಿಸಲು ನಾವು ಅಶಕ್ತರಾದರೆ ಅವು ನಮ್ಮನ್ನು ಗೊಂದಲಗೆಡಿಸುವವು; ಕೊಲ್ಲುವವು; ಹುಚ್ಚು ಹಿಡಿಸುವವು. ಇಂಥ ವಿಚಾರಗಳು ನಮ್ಮ ತಲೆಯಲ್ಲಿ ಬರುವಷ್ಟು ನಾವು ದುರ್ದೈವಿಗಳಾದರೆ, ಅವು ತಲೆದೋರಿದ ಕ್ಷಣದಲ್ಲಿ ಅವುಗಳ ಸ್ವಭಾವವನ್ನರಿತು ನಾವು ಜಾಗರೂಕರಾಗದಿದ್ದರೆ ನಮ್ಮ ಮನಸ್ಸು ತೀರ ಬದಲಾವಣೆಯನ್ನು ಹೊಂದಿಬಿಡುವದು. ಪರಿವರ್ತಿತ ಜೀವನದ ಮಾರ್ಗದಲ್ಲಿ ನಾವು ಯಾವ ಗಿಡದ ತೊಪ್ಪಲವಾಗುವೆವೋ ಏನೋ ತಿಳಿಯದ ಮಾತು.

'ಅದೇ ನನಗೆ ಸಂಭವಿಸಿದುದು, ರಾಯರೇ. ರೌಯೇನದಲ್ಲಿ ನಾನು ನೋಂದಣೀ ಕಚೇರಿಯಲ್ಲಿ ಕಾರಕೂನನಾಗಿದ್ದೆನೆಂದು ಈ ಮೊದಲು ತಿಳಿಸಿದ್ದೇನೆ ತೀರ ಬಡತನವಿಲ್ಲದಿದ್ದರೂ, ಪರಿಸ್ಥಿತಿಯು ಮಾತ್ರ ಬಿಕ್ಕಟ್ಟಿನದು. ಮಿತವ್ಯಯದಿಂದಿರಲು ಸಾಕಷ್ಟು ಎಚ್ಚರದಿಂದಿದ್ದರೂ ನನಗೆ

ಯಾವಾಗಲೂ ಹಣದ ತೊಂದರೆ ತಪ್ಪಿರಲಿಲ್ಲ. ಆದುದರಿಂದ ನನ್ನ ಎಲ್ಲ ಹಂಬಲ-ಹವ್ಯಾಸಗಳನ್ನು ಮೂಲೆಗಿರಿಸಬೇಕಾಯಿತು. ವಯಸ್ಸಿನ ರೀತಿಯಿಂದಲೂ ಜೀವನವು ಇನ್ನಿಷ್ಟು ತಾಪದಾಯಕವೆನಿಸಿತು.

'ವರ್ತಮಾನ ಪತ್ರದ ನಾಲ್ಕನೆ ಕಾಲಂ ತಪ್ಪದೆ ನಾನು ಓದುತ್ತಿದ್ದೆ. 'ಬೇಕು', 'ಬೇಕು', 'ಸುವರ್ಣಸಂಧಿ ಕಳೆದುಕೊಳ್ಳಬಾರದು' ಮೊದಲಾದವುಗಳನ್ನೇ ಹೆಚ್ಚಾಗಿ ನಾನು ಓದುವದು. ನನಗೆ ಇವುಗಳ ಹುಚ್ಚು ಹಿಡಿದಿದ್ದಿತೆಂದರೂ ಅಡ್ಡಿಯಿಲ್ಲ. ಅಷ್ಟು ಅವು ನನಗೆ ಪ್ರೀತಿಯ ಸುದ್ದಿಯಾಗಿದ್ದುವು ಇವೆಲ್ಲವುಗಳ ವಿವರಗಳು ನನಗೆ ಮನದಟ್ಟಾದ್ದರಿಂದ ಕೆಲ ಸ್ನೇಹಿತರಿಗಾದರೂ ಹಿತಸಂಬಂಧವನ್ನು ಬೆಳೆಯಿಸಲು ಯೋಗ್ಯ ಸಂಧಿಯು ಒದಗಿ ಬರಬಹುದೆಂದು ನಾನು ಆಶಿಸುತ್ತಲೇ ಇದ್ದೆನು.

'ಒಂದು ದಿನ ಮಾತ್ರ ನನಗೆ ಅಂಥದೊಂದು ಸುದ್ದಿಯು ಕಣ್ಣಿಗೆ ಬಿದ್ದಿತು. ಅಂದು ಮಾತ್ರ ನಾನು ಕೃತಾರ್ಥನಾದೆನೆಂದು ಭಾವಿಸಿಕೊಂಡೆನು.'

'ಸುಸ್ವರೂಪಿಯಾದ ಪ್ರಬುದ್ಧ ಕನ್ಯೆ, ವಿದ್ಯಾವಂತೆ, ಸುಧಾರಿಸಿದವಳು. ಒಳ್ಳೇ ಮನೆತನ. ಎರಡೂವರೆ ಕೋಟಿ ಫ್ರಾಂಕುಗಳ ಒಡತಿ. ಮದುವೆಯಾಗಬೇಕೆಂದು ಇಚ್ಛಿಸುತ್ತಾಳೆ, ಯೋಗ್ಯ ವರರು ಮುಂದೊರೆದು ಬರಬೇಕು C/o Editor 'Marriage' ಎಂಬ ಸುದ್ದಿಯು ಪ್ರಕಟವಾಗಿತ್ತು.

'ಅಂದೇ ನಾನು ಇಬ್ಬರು ಸ್ನೇಹಿತರೊಡನೆ ಹೋಟೆಲ್ಲಿಗೆ ಊಟ ಮಾಡಲು ಹೋಗಿದ್ದೆ. ಅದರಲ್ಲಿ ಒಬ್ಬನು ಸರಕಾರೀ ವಕೀಲನು, ಇನ್ನೊಬ್ಬನು ನೂಲಿನ ಗಿರಣಿಯ ಒಡೆಯನು. ಹರಟೆಯೂ ಸಂಪಾಗಿ ನಡೆದಿತ್ತು. ಅದು ಹೇಗೊ ಏನೋ ಮದುವೆಯ ವಿಷಯವು ಹೊರಟಿತು. ನನಗೆ ನಗು ತಡೆಯಲಾಗಲಿಲ್ಲ. ಎರಡೂವರೆ ಕೋಟಿ ಫ್ರಾಂಕುಗಳುಳ್ಳ ಒಬ್ಬ ಪ್ರಬುದ್ಧ ರೂಪವತಿಯಾದ ಕನ್ಯೆಗೆ ವರನು ಬೇಕಾಗಿರುವನೆಂದು ಅದೇ ನಾನು ಓದಿದ ಸಂಗತಿಯನ್ನು ಹೇಳಿದೆನು

'ಇಂಥವರು ಯಾವ ಜಾತಿಯ ಹೆಣ್ಣುಮಕ್ಕಳಿರಬೇಕು?' ಎಂದು ಗಿರಣಿಯ ಒಡೆಯನೆಂದನು.

'ಇಂಥ ಕನ್ಯೆಗಳ ವಿವಾಹಗಳು ಒಳ್ಳೇ ರೀತಿಯಿಂದ ಜರುಗಿದ ಅನೇಕ ಉದಾಹರಣೆಗಳು ನನಗೆ ಗೊತ್ತಿವೆ' ಎಂದು ವಕೀಲನು ನನ್ನ ಕಡೆಗೆ ಮುಖವನ್ನು ತಿರುಗಿಸಿ ಮಾತನಾಡಿದನು.

'ನೀವೆಂಥ ದುರ್ದೈವಿಗಳು! ನೀವೇಕೆ ಇದಕ್ಕೆ ಪ್ರಯತ್ನಿಸ ಬಾರದು? ಅಹಹಾ! ಎರಡೂವರೆ ಕೋಟಿ ಫ್ರಾಂಕಗಳು. ಏನು ಬೇಕಾದ್ದು ಮಾಡಬಹುದು! ಅಯ್ಯೋ-ಎರಡೂವರೆ ಕೋಟಿ ಫ್ರಾಂಕೆ!' ಎನ್ನುತ್ತ ಗಿರಣಿಯ ಒಡೆಯನು ದೊಡ್ಡದೊಂದು ನಿಟ್ಟುಸಿರು ಬಿಟ್ಟನು.

'ನಾವು ಮೂವರೂ ಹೊಟ್ಟೆಹುಣ್ಣಾಗುವಂತೆ ಬಿದ್ದು ಬಿದ್ದು ನಕ್ಕೆವು. ಊಟವಾಯಿತು. ಒಂದು ತಾಸಿನ ಮೇಲೆ ನಾನು ನನ್ನ ಮನೆಗೆ ಬಂದೆನು.'

'ಆಂದಿನಿರುಳು ಚಳಿ ವಿಪರೀತ ಬಿದ್ದಿತ್ತು. ಮೇಲಾಗಿ ನಾನಿರುವ ಮನೆಯಾದರೂ ಗಟ್ಟಿಮುಟ್ಟೆಯಿದ್ದಿಲ್ಲ ಸಹಿಸಲಸಾಧ್ಯವಾದ ಚಳಿಯಿಂದ ನಡಗು ಬಿಡದ್ದರಿಂದ ಅಟ್ಟದಿಂದ ಕೆಳಗಿಳಿಯಬೇಕೆಂದು ಕಬ್ಬಿಣದ ಪಾವಟಿಗೆಗಳನ್ನಿಳಿಯಲು ಸಲಾಕೆಯನ್ನು ಹಿಡಿದೆ. ಮೈಯಂತ ಮೈಯೆಲ್ಲ ಜುಮ್ಮೆಂದಿತು 'ದೇವಾ, ಈ ತರದ ಕಷ್ಟದಿಂದ ನನ್ನನ್ನು ಪಾರಾಗಿಸಲು ನಿನಗೆ ಕರುಣೆ ಹುಟ್ಟದೇ' ಎಂಬ ಶಬ್ದಗಳು ತನ್ನಿಂದ ತಾನೆ ನನ್ನ ಬಾಯಿಂದ ಹೊರಬಂದವು. ಒಮ್ಮೆಲೆ ಏನೋ ನೆನಪಾದಂತಾಗಿ 'ಎರಡೂ ವರೆ ಕೋಟಿ ಫ್ರಾಂಕು!' ಎಂದು ಗೊಣಗುಟ್ಟಿದೆನು ಅಷ್ಟು ದೊರೆತರೆ ಬೇಕಾದ ಅನುಕೂಲತೆಗಳನ್ನು ಕಲ್ಪಿಸಿಕೊಳ್ಳಬಹುದೆಂಬ ಆಶೆಯು ಅವನಿಗೆ ಮೂಡಿರಬಹುದಲ್ಲದೆ ಮತ್ತೇನಿರಬೇಕು?

'ನನ್ನ ಕೋಣೆ. ಅಸ್ತವ್ಯಸ್ತವಾಗಿ ಎಲ್ಲ ಸಾಮಾನುಗಳು ಹರಡಿವೆ ಬ್ರಹ್ಮಚಾರಿಯ ಹಾಸುಗೆ. ಕೊಡವಿ ನೀಟಾಗಿರಿಸುವವರು ಯಾರು?-ಹಾಸಿ ಎಷ್ಟು ದಿನಗಳಾಗಿದ್ದವೋ ದೇವರಿಗೇ ಗೊತ್ತು. ಕೋಟುಗಳೂ ಖುರ್ಚಿ ಗಳ ಬೆನ್ನಿಗೆ ತೂಗಹಾಕಿವೆ. ಕೆಲವು ವರ್ತಮಾನಪತ್ರಗಳು ನೆಲದ ಮೇಲೆ ಅಲ್ಲಲ್ಲಿ ಬಿದ್ದಿವೆ. ಬೆಂಕಿಯೂ ಇಲ್ಲ. ಮೊಣಕಾಲಮಟ ಕಸ. ಕೇಳುವ ದೇನು? ಇಂಥ ಕೋಣೆ ನೋಡಲು ಬಲು ಅಪರೂಪವೆಂದು ಹೇಳದಿರ ಲಾರೆ. ಮತ್ತೆ ಆ ನೆನಪು ಬಂದು ತಲೆಯಲ್ಲಿ ಗುಣಗುಣಿಸತೊಡಗಿತು.

ಎರಡು ಕೋಟಿ ! ಎರಡು ಕೋಟಿ ! ಮೇಲೊಂದರ್ಧ ಕೋಟಿ !
ಇಲ್ಲವದಕೆ ಸಾಟಿ !-ಚೆಲುವ ಹೆಣ್ಣು ಘಾಟಿ ! '

ಎಂದು ಆಶೆಯು ಹಾಡಿನ ರೂಪವಲ್ಲಿ ಪರಿಣಮಿಸಿತು. ಗಟ್ಟಿಯಾಗಿ ಹಾಡುತ್ತ ನಾನು ಕುಣಿದಾಡಿದೆನು.

' ನಿಮ್ಮ ಮುಂದೆ ಮುಚ್ಚುಮರೆಯಿಲ್ಲದೆ ನಾನು ಹೇಳುತ್ತೇನೆ. ಅವಳ ವಿಚಾರವು ನನ್ನ ತಲೆಯಲ್ಲಿ ಈವರೆಗೂ ಸುಳಿದಿರಲಿಲ್ಲ ಹಾಸಿಗೆ ಯಲ್ಲಿ ಮಲಗಬೇಕೆಂದು ಬಿದ್ದೆ. ಸುಡುಗಾಡ ಚಳಿಯೂ ಏನು ಮಾಡಿ ದರೂ ಕಡಿಮೆಯಾಗದ್ದರಿಂದ ಅವಳ ವಿಚಾರವು ನೆನಪಾಗದುಳಿಯಲಿಲ್ಲ ಆಮೇಲೆ ಏನು ಮಾಡಿದರೂ ಕಣ್ಣಿಗೆ ಕಣ್ಣು ಹತ್ತಲಿಲ್ಲ, ಪೂರ್ಣ ಜಾಗರಣೆಯಾಯಿತು.

' ಬೆಳ್ಳಂಬೆಳಕಾಯ್ತು. ಅಂದಿನ ಕೆಲಸಗಳೆಲ್ಲ ಕಣ್ಮುಂದೆ ನಿಂತವು. ಒಂದು ಮಹತ್ವದ ಕೆಲಸಕ್ಕಾಗಿ ನಾನು ಎಂಟು ಗಂಟೆಗೆ ಡಾರ್ನೆಟಾಲಕ್ಕೆ ಹೋಗಲೇಬೇಕಾಗಿತ್ತು. ಆ ಎರಡುವರೆ ಕೋಟಿ, ಹೆಣ್ಣು, ಈ ವಿಚಾರ ದಲ್ಲಿ ಅಷ್ಟು ಬೇಗನೇ ಏಳಲಾಗಲಿಲ್ಲ; ಆದರೂ ಗಡಿಬಿಡಿಯಿಂದೆದ್ದು ಆ ಕೆಲಸಕ್ಕಾಗಿ ಹೊರಟೇ ಬಿಟ್ಟೆನು.

' ಹತ್ತು ಗಂಟೆಗೆ ನಾನು ತಿರುಗಿ ಮನೆಗೆ ಬಂದೆನು ಚಳಿಯು ಕಡಿಮೆಯಾಗಿ ವಾತಾವರಣದಲ್ಲಿ ಶೆಕೆಯು ತುಂಬಹತ್ತಿತ್ತು. ಬಂದವನೆ ನಿತ್ಯದಂತೆ ನ್ಯಾರಿಯನ್ನು ಮುಗಿಸಿದೆನು ದೈನಂದಿನ ಕೆಲಸಗಳಲ್ಲಿ ತೊಡಗಿದೆ. ಆ ವಿಚಾರವೇ ತಲೆಯಲ್ಲಿ ತುಂಬಿದ್ದರಿಂದ ಅವಳು ಯಾರು ? ನಾನೇಕೆ ಅವಳಿಗೆ ಬರೆಯಬಾರದು ? ಅವಳ ಶೋಧ ಮಾಡದೆ ಮನಸಿಗೆ ಸಮಾಧಾನ ದೊರೆಯದಾಯಿತು.

' ರಾಯರೇ ಎರಡು ವಾರ ನಾನು ದಿಙ್ಮೂಢನಾಗಿದ್ದೆ. ನನ್ನ ತೊಂದರೆಗಳೇನು ಕಡಿಮೆಯಿರಲಿಲ್ಲ. ಈ ಮೊದಲು ಇವುಗಳಿಗಾಗಿ ನಾನು ಬಹಳಷ್ಟು ನೊಂದುಕೊಂಡಿರಲಿಲ್ಲ. ಆದರೆ ಈಗ ಮಾತ್ರ ಅವುಗಳೇ ನನ್ನನ್ನು ಜರ್ಜರಗೊಳಿಸಿದವು. ಅವಳ ಬಗ್ಗೆ ಮತ್ತಿಷ್ಟು ವಿಚಾರ ಮಾಡಲು ಹಚ್ಚಿದವು.

ಕಲ್ಪನೆಯ ಚಿತ್ರದಿಂದ ನಾನು ಅವಳ ಚರಿತೆಯನ್ನು ಮುಗಿಸಿದೆನು. ರಾಯರೇ, ಒಬ್ಬರು ಒಂದರ ಚಿಂತನೆಯ ಚಿತ್ರವನ್ನು ಕಲ್ಪಿಸಹತ್ತಿದರೆ ಅದರ ಪ್ರತ್ಯಕ್ಷ ಸ್ವರೂಪವು ಅವರಿಗೆ ಕಂಡೇ ಕಾಣುವದು. ವರ್ತಮಾನ ಪತ್ರಗಳ ಮುಖಾಂತರವಾಗಿ ಉಚ್ಚಕುಲದ ಶ್ರೀಮಂತ ರೂಪವತಿಯಾದ ಕನ್ಯೆಯು ವರನನ್ನು ಶೋಧಿಸುವದು ಅಷ್ಟು ಸಮಂಜಸವಾದುದೆಂದು ನಾನು ಗಣಿಸಲಾರೆ. ಆದರೂ ಅವಳೂ ಒಬ್ಬ ದುಃಖಿತ ಜೀವಿಯಿರಬಹುದೆಂದು ನಾನು ಕಲ್ಪಿಸಿದ್ದೆ.

'ಮೊದಮೊದಲು ಈ ಎರಡೂವರೆ ಕೋಟಿಗೆ ಅಷ್ಟೊಂದು ಬೆಲೆಯನ್ನು ನಾನು ಕೊಡಲಿಲ್ಲ. ಯಾಕೆಂದರೆ ಈ ವರ್ತಮಾನ ಪತ್ರಗಳ ಮುಖಾಂತರ ಹೊಂದುವ ಮದುವೆಗಳಿಗೆ ಆರು ಕೋಟಿಯಿಂದ ಹನ್ನೆರಡು ಕೋಟಿಗಳವರೆಗೆ ಅಂಕಿಗಳು ಬರುತ್ತಿರುವದನ್ನು ನಾನು ಅದೆಷ್ಟೋ ಸಲ ಓದಿದ್ದೆ. ಕಡೆಗೆ ಹನ್ನೆರಡು ಕೋಟಿಯಾದರೂ ಇದ್ದರೆ-ಮನವು ಎಷ್ಟು ಸಂತೋಷ ಪಡೆಯುತ್ತಿತ್ತು ! ಆದರೂ ಇಂಥ ಜಾಹೀರು ಪಡಿಸಿದ ವಚನಗಳ ಸತ್ಯಾಂಶವು ಎಷ್ಟರಮಟ್ಟಿಗೆ ನಂಬಲರ್ಹವೋ ಎಂಬ ಸಂಶಯವು ಮಾತ್ರ ಬಾರದೆ ಹೋಗಲಾರದು. ಬಹುತರವಾಗಿ ಆಸ್ತಿಯ ಮಾತು ಸುಳ್ಳಾಗುವದೇ ಎಂಬ ಮಾತು ಮನದಟ್ಟಾದುದು. ಆದರೆ ಈ ಎರಡೂವರೆ ಕೋಟಿ ಆ ಮಾನದಿಂದ ತೀರ ಚಿಕ್ಕ ಅಂಕಿಯಾದುದರಿಂದ ನಿಜವಿದ್ದರೂ ಇರಬಹುದೆಂದು ನಂಬಲು ಅವಕಾಶವುಂಟು. ಇಲ್ಲವೆ ಯಾವನಾದರೊಬ್ಬ ಶ್ರೀಮಂತನ ಮಗಳಿರಬಹುದು ಯಾರಾದರೂ ಅವಳನ್ನು ಪ್ರೀತಿಸಿರಬಹುದು. ಅವಳು ಉಚ್ಚಕುಲದ ತಳಿಯಲ್ಲವೆಂದು ಕಂಡುಬಂದ ಮೇಲೆ ಆ ಕುಂದನ್ನು ತೋರಗೊಡದಂತೆ ಈ ಜಾಹೀರಾತಿನ ಮೂಲಕ ಹಣದಾಸೆಯನ್ನು ಹಚ್ಚಿ ಮದುವೆಯಾಗಬೇಕೆಂದು ಅವಳು ಇಚ್ಛೆಪಟ್ಟಿರಲೂ ಬಹುದು.

'ಹೀಗೆ ಕೆಲವು ಸಂಶಯಗಳು ಒಂದರಮೇಲೊಂದು ನನ್ನ ಮನದಲ್ಲಿ ಸುಳಿದಾಡಿದವು. ಇಲ್ಲದ ಸಂಶಯಗಳನ್ನು ಕಲ್ಪಿಸುವದೂ ತಪ್ಪೆಂದೆನಿಸಿತು. ರಾಯರೇ, ನಾವು ನಿಜಕ್ಕೂ ಈ ಪ್ರಣಯದ ವ್ಯವಹಾರವನ್ನು ಎಂದೂ ಓದಬಾರದು.

' ಈ ಕಲ್ಪನೆಯ ಸುಳಿಯಿಂದ ಪಾರಾಗಿ, ಒಬ್ಬ ಸ್ನೇಹಿತನ ಹೆಸರಿನ ಮೇಲೆ ನಾನು ಆವಳ ವಿಳಾಸಕ್ಕೆ ಒಂದು ಪತ್ರವನ್ನು ಬರೆದೆನು ಐದನೆಯ ದಿನ ಮಧ್ಯಾಹ್ನ ಮೂರು ಗಂಟೆಗೆ ನಾನು ಕಚೇರಿಯಲ್ಲಿಯು ಕೆಲಸಕ್ಕಾಗಿ ಹೋಗಿದ್ದೆನು.

' ಆದಾರೋ ' ವೆಲ್ ಬೆಂಟರ್ ಪ್ರಾಯಿರ್ಝ್ ' ಎಂಬವಳು ಬಂದಿದ್ದಾಳೆ ' ಎಂದು ನನಗೆ ಸುದ್ದಿಯು ಬಂದಿತು.

' ಒಳಗೆ ಬರಲಿಕ್ಕೆ ತಿಳಿಸಬೇಕು ' ಎಂದು ನಾನೆಂದೆ.

' ಮೂವತ್ತು ವರುಷದ ಹೆಣ್ಣುಮಗಳು ಒಳಬಂದಳು. ಸಾದಗಪ್ಪು. ಸ್ವಲ್ಪ ಬೆದರಿದ ಮುಖವೆಂದು ಒಡೆದು ಕಾಣುತ್ತಿತ್ತು.

' ಈ ಕುರ್ಚಿಯ ಮೇಲೆ ಕುಳಿತುಕೊಳ್ಳಬೇಕು ' ಎಂದು ನಾನು ಆವಳಿಗೆ ಹೇಳಿದೆನು

' ಆವಳು ಸಂಕೋಚಪಟ್ಟವಳಾಗಿ ಕುಳಿತುಕೊಂಡಳು. ' ಆವಳೇ ನಾನು, ರಾಯರೇ ' ಎಂದು ಆವಳಂದಳು.

' ನನಗೆ ನೆನಪಿಗೆ ಬರಲೊಲ್ಲದು. '

' ನೀವೊಂದು ಪತ್ರ ಬರೆದಿದ್ದಿಲ್ಲವೇ ನನಗೆ ? '

' ಮದುವೆಯ ವಿಷಯವಾಗಿ ಅಲ್ಲವೇ ? '

' ಹೌದು. ರಾಯರೇ. ಹೌದು. '

' ಓಹೋ ! ಒಳಿತಾಯಿತು. '

' ನಾನೇ ಸ್ವಂತ ಬಂದಿದ್ದೇನೆ. ಇಂಥ ಪ್ರಸಂಗಕ್ಕೆ ಸ್ವತಃ ಬರುವದೇ ಯುಕ್ತವೆಂದು ಹೀಗೆ ಮಾಡಿದ್ದೇನೆ. '

' ಹೌದು. ಅದು ನನಗೂ ಒಪ್ಪಿದ ಮಾತು. ಮದುವೆಯಾಗಬೇಕೆಂದು ಇಚ್ಛೆಯಿದೆಯೇ ? '

' ಇರದೇನು ? ಬಲವಾದ ಇಚ್ಛೆಯಿದೆ. '

' ಮತ್ತೆ ಯಾರು ಯಾರು ನಿಮ್ಮ ಮನೆಯಲ್ಲಿ ? '

' ಆವಳು ಅನುಮಾನಿಸಿದಳು. ಮುಖವನ್ನು ಕೆಳಗೆ ಮಾಡಿ ಯಾರೂ ಇಲ್ಲ. ತಾಯಿತಂದೆ ಇಬ್ಬರೂ ತೀರಿಹೋಗಿದ್ದಾರೆ ' ಎಂದು ನಡಗುವ ದನಿಯಲ್ಲಿ ಆವಳು ಉತ್ತರವನ್ನು ಕೊಟ್ಟಳು.

'ನಾನೂ ಚಕಿತನಾದೆ. ಈ ಅನಾಥೆಯ ವಿಷಯದಲ್ಲಿ ನನಗೆ ಕರುಣೆ ಹುಟ್ಟಿತು ಒಮ್ಮೆಲೆ ಸಹಾನುಭೂತಿಯೂ ಜಾಗೃತವಾಯಿತು. 'ಆ ಆಸ್ತಿಯೆಲ್ಲವೂ ನಿಮ್ಮ ಹಕ್ಕಿನದೇ ಇರುವದಲ್ಲವೇ' ಎಂದು ಮೆಲ್ಲಗೆ ನಾನು ವಿಚಾರಿಸಿದೆನು.

'ಈಗ ಮಾತ್ರ ಅವಳು ಅನುಮಾನಿಸದೆ ಧೈರ್ಯದಿಂದ 'ಹೌದು ರಾಯರೇ ನನ್ನದೆ –' ಅದರಲ್ಲೇನೂ ಸಂಶಯವಿಲ್ಲ ಎಂದು ಗಟ್ಟಿಯಾಗಿ ನುಡಿದಳು

'ನಾನವಳನ್ನು ನೆಟ್ಟನೋಟದಿಂದ ನೋಡಿದೆ. ಅವಳೂ ನನ್ನನ್ನು ನಿರಾಶಳನ್ನಾಗಿ ಮಾಡಲಿಲ್ಲ. ನಿಜವಾಗಿಯೂ ರೂಪವತಿಯು, ಗಟ್ಟಿಗಳು ಆ ಪತ್ರವನ್ನು ಬರೆದವನು ತಾನೇ ಎಂದು ಬಗೆದು ಮದುವೆಯಾದರೆ ಒಳಿತಾಗುವದೆಂದೂ, ಅಷ್ಟು ಆಸ್ತಿಯೂ ಕೈಗೆ ಸಿಕ್ಕುವದೆಂದೂ ಸವಿಗನಸುಗಳನ್ನು ಅವಳೆದುರಿನಲ್ಲಿಯೇ ಕಾಣಹತ್ತಿದೆನು. ಮನಸಿನಲ್ಲಿಯು ಮಂಡಿಗೆಯು ಉಣ್ಣಲು ಸಿಕ್ಕಿತೆಂದು ಹಿಗ್ಗಿದೆನು. ನಾನು ಯಾರ ಹೆಸರಿನಿಂದ ಪತ್ರವನ್ನು ಬರೆದಿದ್ದೆನೋ ಅವನ ಪರಿಚಯವನ್ನು ಅವಳಿಗೆ ಹೇಳಿದೆನು. ಅವನನ್ನು ಪ್ರತ್ಯಕ್ಷ ನೋಡಿದ ಮೇಲೆ ನಾನೇನು ವಿಶೇಷವಾಗಿ ಹೇಳುವ ಕಾರಣವುಂಟಾಗದು. ಅವನು ಇಂಗ್ಲಂಡಕ್ಕೆ ಹೋಗಿದ್ದಾನೆ ೩-೪ ದಿನಗಳಲ್ಲಿ ಬರಬಹುದು.

'೩–೪ ದಿನ ಬೇಕೇ?' ಎಂದು ಅವಳು ನಿಟ್ಟುಸಿರಿಟ್ಟಳು.

'ಹೌದು–ಇಲ್ಲ ಮನೆಗೆ ತಿರುಗಿ ಹೋಗುವ ಆವಶ್ಯಕತೆ ಬಹಳಿದೆಯೇ' ಎಂದು ನಾನು ವಿಚಾರಿಸಿದೆ.

'ಹಾಗೇನೂ ಇಲ್ಲ ಬರುವವರೆಗೆ ಇಲ್ಲಿಯೇ ಇರಬೇಕೆನ್ನುವೆನು.

'ಹಾಗೆ ಮಾಡಬಹುದು. ಸುಖವಾಗಿ ಹೊತ್ತು ಹೋಗುವಂತೆ ನಾನು ಏರ್ಪಾಡುಮಾಡಲು ಯತ್ನಿಸುತ್ತೇನೆ.'

'ರಾಯರೇ, ತಾವು ಬಹಳ ಉಪಕಾರವಂತರು'

'ಇಲ್ಲಿ ಉಳಿದುಕೊಂಡುದು ಯಾವ ನಿವಾಸದಲ್ಲಿ?'

'ರೌಯೇನ್‌ದಲ್ಲಿಯ ಮೇಲ್ತರಗತಿಯ ನಿವಾಸದ ಹೆಸರೊಂದನ್ನು ಅವಳು ಹೇಳಿದಳು.'

‘ನಾನೂ ಊಟಕ್ಕೆ ಅತ್ತಕಡೆಗೆ ಬರಬೇಕೆನ್ನುತ್ತೇನೆ. ಅಷ್ಟಣೆ ದೊರೆಯುಬಹುದೇ ? ಎಂದು ನಾನವಳನ್ನು ವಿಚಾರಿಸಿದೆನು.

‘ ಅವಳು ಕೊಂಚ ವಿಚಾರಮಾಡಿದಂತೆ ಮಾಡಿ, ಏನು ಉತ್ತರ ಕೊಡಬೇಕೆಂದು ತಿಳಿಯದೆ–‘ ಓಹೋ, ಬರಬಹುದು ’ ಎಂದು ಸಾವಕಾಶವಾಗಿ ಹೇಳಿದಳು.

‘ ಹಾಗಾದರೆ ನಾನು ಏಳು ಗಂಟೆಗೆ ಅಲ್ಲಿಗೆ ಬರುವೆನು. ’

‘ ರಾಯರೇ, ಆಗಬಹುದು. ನಾನು ದಾರಿ ಕಾಯುವೆನು ’ ಎಂದು ಅವಳು ಮರುಮಾತಾಡಿದಳು.

‘ ನಾನು ಅವಳನ್ನು ಹೊರಬಾಗಿಲವರೆಗೆ ಕಳುಹಿಸಿ ಬಂದೆನು.

‘ ಸರಿಯಾಗಿ ಏಳು ಗಂಟೆಗೆ ನಾನು ಅವಳಿಳಿದುಕೊಂಡ ನಿವಾಸಕ್ಕೆ ಹೋದೆನು. ಅವಳು ನನ್ನನ್ನು ಪ್ರೇಮಾದರಪೂರ್ವಕವಾಗಿ ಬರಮಾಡಿಕೊಂಡಳು. ನನಗೆ ಪೂರ್ಣ ಪರಿಚಯವಿದ್ದ ಒಂದು ವಿಶ್ರಾಂತಿಗೃಹಕ್ಕೆ ಅವಳನ್ನು ಕರೆದುಕೊಂಡು ಹೋಗಿ ಪ್ರತ್ಯೇಕವಾದ ಊಟದ ವ್ಯವಸ್ಥೆಯನ್ನು ಮಾಡಿಸಿದೆನು. ಮುಂದೆ ಒಂದೆ ತಾಸಿನಲ್ಲಿಯೇ ನಾವಿಬ್ಬರೂ ಸ್ನೇಹಭಾವದವರಾದೆವು. ಅವಳು ತನ್ನ ಪೂರ್ವ ಚರಿತ್ರೆಯನ್ನು ನನಗೆ ಹೇಳತೊಡಗಿದಳು.

‘ ತಾನು ಒಬ್ಬ ಸಭ್ಯಸ್ತ್ರೀಯ ಮಗಳು. ಒಬ್ಬ ಸಭ್ಯಗೃಹಸ್ಥನ ಸಹವಾಸದ ದೋಷವೇ ತನ್ನ ಜನನಕ್ಕೆ ಕಾರಣವು ಈಗ ತಾನು ಸಿರಿವಂತಳು. ತಂದೆ ತಾಯಿ ಇಬ್ಬರಿಂದಲೂ ತನಗೆ ಆಸ್ತಿ ದೊರೆತಿದೆ. ಅವರ ಹೆಸರನ್ನು ಮಾತ್ರ ಅವಳು ಹೇಳಲೇ ಇಲ್ಲ. ಅದರ ಬಗ್ಗೆ ವಿಚಾರಿಸುವದೂ ಅನವಶ್ಯಕವೆಂದು ನಾನು ಸುಮ್ಮನಿದ್ದು ಬಿಟ್ಟೆ. ನನಗೂ ಅದರ ಗೊಡವೆ ಬೇಡಾಗಿತ್ತು. ನನಗೆ ಬೇಕಾದುದು ಮುಖ್ಯವಾಗಿ ಅವಳ ಆ ಆಸ್ತಿ; ಆನಂತರ ಅವಳು ಅದು ನಿಜವಿರುವದೆಂಬ ಬಗ್ಗೆ ನನಗೆ ನಂಬಿಗೆಯುಂಟಾಗುವಂತೆ ಏನು ಬೇಕೋ ಎಲ್ಲವನ್ನೂ ಅವಳಿಂದ ತಿಳಿದುಕೊಂಡೆನು. ಅವಳೂ ಧೈರ್ಯದಿಂದ ಎಲ್ಲವನ್ನು ಸ್ಪಷ್ಟವಾಗಿ ಹೇಳಿದಳು.

ಅವಳ ಆ ವಿವರಣೆಗಳ ವರ್ಣನೆಯೋ ಆಸ್ತಿಯ ಅಸ್ತಿತ್ವದ ಸಾಕ್ಷಿಯೆಂಂದು ನನಗೆ ಮನದಟ್ಟಾಯಿತು.

'ಅವಳು ತಡೆಯಿಲ್ಲದೆ–ಸಂಶಯಕ್ಕಾಸ್ಪದ ಸಿಗದಂತೆ ಹೇಳಿದಳು ಸರಾಯಿಯನ್ನು ತರಿಸಿ ಅವಳಿಗೂ ಒಂದಿಷ್ಟು ಕೊಟ್ಟು ನಾನೂ ಕುಡಿದೆನು ತಲೆಯು ವಿಚಾರಗಳಿಂದ ಭಾರವಾಗಿದ್ದಿತು. ಆ ಮದಿರಾಪಾನದಿಂದ ಶಾಂತವಾಯಿತು. ಯಾರ ಹೆಸರನ್ನು ಹೇಳಿರುವೆನೋ ಅವನು ಒಳ್ಳೇ ವ್ಯವಹಾರದಕ್ಷನಿದ್ದಾನೆ. ಕಾಗದಪತ್ರಗಳಿಲ್ಲದೆ ಅವನನ್ನು ಮನಗಾಣಿಸುವದು ಸ್ವಲ್ಪ ಕಠಿಣ ಕೆಲಸವಾಗಬಹುದೆಂದು ಹೇಳಿ, ಇನ್ನಿಷ್ಟು ಮನವರಿಕೆಮಾಡಿಕೊಳ್ಳಲು ನಾನು ಅದೆಷ್ಟೋ ಹವಣಿಸಿದೆನು

'ಓಹೋ! ಅದೆಲ್ಲ ನನಗೆ ಗೊತ್ತು. ನಾನೆಲ್ಲ ಪುರಾವೆಗಳನ್ನು ತಂದಿದ್ದೇನೆ' ಎಂದು ಗಂಭೀರ ಮುದ್ರೆಯಿಂದ ಅವಳು ಉತ್ತರಕೊಟ್ಟಳು.

'ಇಲ್ಲಿ ಎಲ್ಲವೂ ಇವೆಯೇ?'

'ಹೌದು. ಇಲ್ಲಿಗೇ ತಂದಿದ್ದೇನೆ.'

'ಆ ನಿವಾಸಗಳಲ್ಲಿ ಇವೆಯೇ?'

'ಹೌದು, ಹೌದು ಎಲ್ಲವೂ ಇಲ್ಲಿವೆ.'

'ಅವುಗಳನ್ನು ನನಗೆ ತೋರಿಸಬಹುದೇ?'

'ಅದಕ್ಕೇನು? ತೋರಿಸುವೆನು.'

'ಇಂದೇ?'

'ಇಂದೇ.'

'ಈಗಲೇ.'

'ಇದೆಲ್ಲವೂ ನನಗೆ ಹಲವು ವಿಧದಿಂದ ಹರುಷವನ್ನುಂಟು ಮಾಡಿತು. ಊಟದ ಹಣವನ್ನು ಕೊಟ್ಟು ಅವಳನ್ನು ಆ ನಿವಾಸಕ್ಕೆ ಕಳುಹಿ, ನಾನು ಮನೆಗೆ ತಿರುಗಿದೆನು.

'ನಿಜವಾಗಿಯೂ ಅವಳು ಎಲ್ಲ ಕಾಗದ ಪತ್ರಗಳನ್ನು ಪುರಾವೆಗಾಗಿ ತೆಗೆದುಕೊಂಡೇ ಬಂದಿದ್ದಳು. ಅವುಗಳನ್ನು ನಾನು ನೋಡಿದೆ; ಓದಿದೆನು. ಅವೆಲ್ಲವುಗಳೂ ಮೂಲ ಕಾಗದಗಳಾಗಿದ್ದವು. ಅವುಗಳ ಬಗ್ಗೆ ನನಗೆ ತಿಲಮಾತ್ರ ಸಂಶಯವುಂಟಾಗಲಿಲ್ಲ. ಈ ಕಾಗದ ಪತ್ರಗಳು ನೀಡಿದ

ಆನಂದವು ನನ್ನನ್ನು ಮೈಮರೆಯಿಸಿಬಿಟ್ಟಿತು. ಅವಳನ್ನು ಅಪ್ಪಿಕೊಂಡೇ ಬಿಡಬೇಕೆಂಬ ಬಲವಾದ ಆಶೆಯು ನನ್ನ ನರನರಗಳಲ್ಲಿ ಸುಳಿದಾಡಹತ್ತಿತು ಇದು ಪವಿತ್ರ ಆಶೆಯೆಂದು ನಾನು ಭಾವಿಸಿದೆನು. ತೃಪ್ತಿಹೊಂದಿದ ಮನುಷ್ಯನ ಇಚ್ಛೆಯಲ್ಲವೆ ? ಇಚ್ಛೆಯ ಬಲವು ಹೆಚ್ಚಾದ್ದರಿಂದ ಇಬ್ಬರಲ್ಲಿಯೂ ಒಲವಿನ ಸಂಗಮವಾಗಲು ಬಹಳ ಹೊತ್ತು ಹಿಡಿಯಲಾರದೆಂದು ನಾನು ತರ್ಕಿಸಿದೆನು.

' ಆದರೆ, ರಾಯರೇ, ಅವಳು ಒಂದೆಸವನೆ ಅಳಹತ್ತಿ ಈ ಸಮ್ಮಿಲನದ ಸುದ್ದಿಯನ್ನು ಇನ್ನಾರಿಗೂ ಹೇಳಬಾರದೆಂದು ದೈನಾಸಬಡುತ್ತ ಬಿನ್ನವಿಸಿಕೊಂಡಳು. ಅವಳ ಆ ಅವಸ್ಥೆಯನ್ನು ಕಂಡು ಅವಳಿಚ್ಛೆಯಂತೆ ಗುಟ್ಟಾಗಿಡುವೆನೆಂದು ವಚನವನ್ನಿತ್ತೆನು. ಇತ್ತ ನನ್ನ ಮನ–ಬುದ್ಧಿಗಳೆರಡೂ ಗೊಂದಲಗೆಟ್ಟು ಹೋದವು.

' ಇನ್ನೇನು ಮಾಡುವದು ? ಬೇರೆ ಒಬ್ಬರಿರುವರೆಂದು ತಿಳಿಸಿದ್ದಕ್ಕೆ ನನ್ನನ್ನೇ ಮನವಾರೆ ಹಳಿದುಕೊಂಡೆನು. ಯಾಕೆಂದರೆ ಹಾಗೆ ಯಾರೂ ಇರಲಿಲ್ಲ–ಅವನೇ ನಾನಾದ್ದರಿಂದ. ಎಂಥ ವಿಚಿತ್ರ ಪ್ರಸಂಗ ! ಒಳ್ಳೇ ಬಿಕ್ಕಟ್ಟಿನಲ್ಲಿ ಸಿಕ್ಕಿರುವೆನೆಂಬ ಎಚ್ಚರಿಕೆಯು ಕೈಕಾಲು ಗೆಡಿಸಹತ್ತಿತು. ಅವಳಿಂದ ಹೇಗಾದರೂ ಪಾರಾಗಬಹುದಿತ್ತು. ಆದರೆ ತೆರವು ! ಆ ಎರಡೂವರೆ ಕೋಟಿ ಫ್ರಾಂಕು ! ಅಯ್ಯೋ ತೆರವೇ ! ಅದನ್ನು ಕಳೆದುಕೊಂಡರೆ ನನ್ನ ಪ್ರಾಣನಾಶಕ್ಕೆ ನಾನೇ ಕಾರಣನಾದಂತೆನಿಸಿತು. ಇಷ್ಟೆಲ್ಲ ಪರಿಸ್ಥಿತಿಯುಂಟಾಗಿರಲು ಅವಳನ್ನಾದರೂ ಬಿಡುವದೆಂತು ? ಬಿಟ್ಟರೆ ಆಗುವ ಅನಾಹುತವೆಂತಹುದೋ ಏನೋ ! ಈ ತೆರದಿಂದ ವಶವಾದ ಹೆಣ್ಣಿನ ಸ್ಥಿರತೆಯ ಬಗ್ಗೆ ಎಷ್ಟೊಂದು ನಂಬಿಗೆಯನ್ನಿಡಬಹುದು ಎಂಬಿವೇ ಮೊದಲಾದ ವಿಚಾರಗಳ ತಾಕಲಾಟವು ನನ್ನನ್ನು ಕುಣಿದಾಡಿಸತೊಡಗಿಸಿತು

ರಾತ್ರಿಯನ್ನು ಕಳೆಯಬೇಕಾದರೆ ನನಗೆ ಸಾಕುಬೇಕಾಯಿತು. ಏನಾದರೊಂದು ನಿರ್ಧಾರವನ್ನು ಮಾಡಲು ನನ್ನ ಶಕ್ತಿಯು ಸಾಲದಾಯಿತು. ಅಂಥ ಭೀಕರ ರಾತ್ರಿ ಕಳೆಯಿತು. ದಿನಕರನ ಪ್ರಕಾಶದೊಡನೆ

ನನ್ನ ಮನಸ್ಸಿನಲ್ಲಿದ್ದ ಕತ್ತಲೆಯು ಹರಿಯಿತು. ಒಂದು ನಿರ್ಣಯವನ್ನು ಗೊತ್ತುಮಾಡಿದೆ. ನೀಟಾಗಿ ಪೋಷಾಕು ಮಾಡಿಕೊಂಡು ೧೧ ಗಂಟೆಗೆ ಅವಳಿಳಿದ ಸ್ಥಳಕ್ಕೆ ನಾನು ಹೋದೆನು.

'ಅವಳು ನನ್ನನ್ನು ನೋಡಿದಳು. ಅವಳ ಮುಖವು ಕೆಂಜಗ ವಾಯಿತು. ಧೈರ್ಯದಿಂದ ನಾನು ಅವಳನ್ನು ವಿಚಾರಿಸಿದೆ: 'ಚ್ಯಾಂಟರ್ ಪ್ರಾಯಿರ್ಝ್, ನಮ್ಮ ನಮ್ಮ ತಪ್ಪುಗಳನ್ನು ತಿದ್ದಿಕೊಳ್ಳಲು ಒಂದೇ ಒಂದು ಉಪಾಯವಿದೆ. ಅದೆಂದರೆ– ನೀನು ನನ್ನ ಕೈಹಿಡಿದರೆ ಎಲ್ಲವೂ ಸರಿ ಹೋಗುವದು' ಎಂದು ನಾನು ಸ್ಪಷ್ಟವಾಗಿ ಹೇಳಿಬಿಟ್ಟೆನು.

'ನಾನು ಕೈಹಿಡಿಯಲು ಒಪ್ಪುತ್ತೇನೆ' ಎಂದು ಅವಳು ತುಸು ಲಜ್ಜೆಯಿಂದ ಬಾಯಲ್ಲಿಯೇ ಗುಣಗುಟ್ಟಿದಳು.

* * * *

'ಮದುವೆಯನ್ನು ಮಾಡಿಕೊಂಡೆ; ಆರುತಿಂಗಳು ಸುಸೂತ್ರವಾಗಿ ಕಳೆದುವು. ಭಾಂಡವಲುಗಾರರ ವೈಭವದಂತೆ ನಾನೂ ನನ್ನ ಜೀವನ ವನ್ನು ಮಾರ್ಪಡಿಸಿಕೊಂಡೆನು. ಹೆಂಡತಿಯಲ್ಲಿ ಏನಾದರೂ ತಪ್ಪು ಹುಡುಕಬೇಕೆಂದು ಪ್ರಯತ್ನಪಟ್ಟೆನು; ಸಾಧ್ಯವಾಗಲಿಲ್ಲ.

'ಹೀಗೆ ಕೆಲ ದಿನಗಳು ಕಳೆದುವು. ಆಮೇಲೆ ಅವಳು ಎಲ್ಲಿಲ್ಲಿಯೋ ತಪ್ಪದೆ ಹೋಗಿಬರುವದು ನನ್ನ ದೃಷ್ಟಿಗೆ ಬಿತ್ತು. ಒಂದು ವಾರ ಮಂಗಳ ವಾರ, ಮರುವಾರ ಬುಧವಾರ, ಹೀಗೆ ಅವಳು ಹದಿನೈದು ದಿನಕ್ಕೊಮ್ಮೆ ತನ್ನ ಪ್ರಯಾಣವನ್ನು ನಿಯಮಿತವಾಗಿ ಸಾಗಿಸಹತ್ತಿದಳು. ಅವಳು ನನ್ನನ್ನು ಮೋಸಗೊಳಿಸಿರುವಳೆಂದೇ ನಾನು ಕಲ್ಪಿಸಿದೆನು ಅವಳಿಗೆ ತಿಳಿಯದ ಹಾಗೆ ಅದನ್ನು ಶೋಧಿಸಬೇಕೆಂದು ನಾನೂ ಹೋದೆನು. ಅಂದು ಮಂಗಳವಾರ. ಅವಳು ೧ ಗಂಟೆಗೆ ಮನೆಯಿಂದ ಹೊರಟಳು. ನಡೆಯುತ್ತ ರಿಪಬ್ಲಿಕ್ ರೋಡಿನೊಳಹೊಕ್ಕು ಬಲಗಡೆಗೆ ತಿರುಗಿ ಮುಂದೆ ಸಾಗುತ್ತ ಸಿಯಾನಕ್ಕೆ ಹೋಗುವ ಗ್ರೇಟ್ ಬ್ರಿಜ್‌ದ ದಾರಿಹಿಡಿದಳು. ಅಲ್ಲಿಂದ ಮುಂದೆ ಹಾಗೆಯೇ ಪೀಟರ್ಸ ಬ್ರಿಜ್ಜಿಗೆ ಬಂದು ಅದನ್ನು ದಾಟಿ ಆ ಬದಿಗೆ ಹೋದಳು. ದಾರಿಯುದ್ದಕ್ಕೂ ಅವಳು ಹಿಂದೆ ಹಿಂದೆ ಒಂದೇಸವನೆ

ಹುಳು ಹುಳು ನೋಡುತ್ತ ಹೊರಟಿದ್ದಳು. ಸ್ವಲ್ಪ ಗೊಂದಲಗೆಟ್ಟ ಭಾವವು ಅವಳ ಮೊಗದಲ್ಲಿ ಮೂಡಿತ್ತು.

'ನಾನು ಕಲ್ಲಿದ್ದಲಿಯನ್ನು ಹೊರುವ ಕೂಲಿಯ ವೇಷದಿಂದ ಹೊರಬಿದ್ದುದರಿಂದ ಅವಳಿಗೆ ನನ್ನ ಗುರುತು ಹಿಡಿಯಲಾಗಲಿಲ್ಲ. ಕಡೆಗೆ ಅವಳು ಎಡಬದಿಗಿರುವ ಹಡಗ ನಿಲ್ಲುವ ಸ್ಥಳದಲ್ಲಿ ಪ್ರವೇಶವಾಡಿದಳು. ೧-ಳಂಕ್ಕೆ ಬರಲಿರುವ ಗಾಡಿಯಿಂದ ಅವಳ ಪ್ರಿಯಕರನು ಬರಬಹುದೆಂದು ನಾನು ಕಲ್ಪಿಸದಿರಲಿಲ್ಲ.

'ನಾನೂ ಅವಳು ಕಾಣಿಸುವ ಹಾಗೆ ಒಂದು ಸ್ಥಳದಲ್ಲಿ ಕುಳಿತೆನು. ಸೀಟಿಯ ಸಪ್ಪಳ, ಪ್ರಯಾಣಿಕರ ಗುಂಪು. ಈ ಗದ್ದಲದೊಳಗೆ ಅವಳು ಹಿಂದುಮುಂದೆ ನೋಡದೆ ನಗುತ್ತ ಮುಂದುವರಿದಳು. ಒಬ್ಬ ವೃದ್ಧ ಮನುಷ್ಯನು ಬಂದು ಹುಡುಗಿಯನ್ನು ಇಳಿಸಿಕೊಳ್ಳಹತ್ತಿದ್ದನು. ಆ ಹುಡುಗಿಗೆ ಮೂರು ವರುಷವಾಗಿರಬಹುದು. ಇವಳು ಹೋದವಳೆ ಆ ಹುಡುಗಿಯನ್ನು ಗಟ್ಟಿಯಾಗಿ ಅಪ್ಪಿಕೊಂಡು, ಒಂದೇಸವನೆ ಎರಡೂ ಗಲ್ಲಗಳಿಗೆ ಮುದ್ದು ಕೊಡಹತ್ತಿದಳು. ಆ ಮೇಲೆ ಅವಳು ದಾದಿಯ ಕೈಯಲ್ಲಿದ್ದ ಇನ್ನೊಂದು ಕೂಸನ್ನು-ಗಂಡೋ-ಹೆಣ್ಣೋ ತಿಳಿಯಲಿಲ್ಲ-ಎತ್ತಿಕೊಂಡು ಎದೆಗಪ್ಪಿಕೊಂಡಳು. ಆ ದಾದಿ, ಮುದುಕನು ಸಹಿತವಾಗಿ ಅವಳು ಸಮೀಪದಲ್ಲಿಯೇ ಇದ್ದ ಕ್ವೀನ್ಸ್ ಕೋರ್ಸಿನ ಕಡೆಗೆ ಮೋರೆ ತಿರುವಿ ಮುಂದೆ ಸಾಗಿದಳು.

'ನಾನು ಮನೆಗೆ ತಿರುಗಿದೆನು. ಚಿಂತಾಗ್ನಿ ಪ್ರಜ್ವಲಿತವಾಯಿತು. ಏನೂ ತೋಚದಾಯಿತು. ಅವಳು ಊಟದ ಮನೆಗೆ ಬಂದಾಗ ನಾನು ಗಂಟು ಮೋರೆಯಿಂದ ವಿಚಾರಿಸಿದೆನು.

'ಆ ಕೂಸುಗಳು ಎಲ್ಲಿಯವು?'

'ಯಾವ ಕೂಸುಗಳು?' ಎಂದು ಅವಳು ಕೇಳಿದಳು.

'ಸೇಂಟ್ ಸೀವಿಯರದಲ್ಲಿ ನೀನು ದಾರೀ ಕಾಯುತ್ತ ನಿಂತಿದ್ದೆಯಲ್ಲ! ಅವು—'

'ಅವಳು ಚೀರಿಕೊಂಡಳು; ದೊಪ್ಪನೆ ನೆಲಕ್ಕುರುಳಿದಳು. ಅವಳು

ಮೂರ್ಛಿತಳಾದಳು ತುಸು ಹೊತ್ತಿನ ಮೇಲೆ ಅವಳು ಎಚ್ಚರವಾದಳು. ಅವಳ ಕಣ್ಣುಗಳಲ್ಲಿ ಕಂಬನಿಗಳ ಹೊಳೆಯೇ ಉಗಮವಾಯಿತು ಅಂಥ ದುಃಖದಲ್ಲಿಯೇ ಅವಳು ತನಗೆ ನಾಲ್ಕಿವೆಯೆಂದು ಒಪ್ಪಿಕೊಂಡಳು—ಎರಡು ಹೆಣ್ಣು, ಎರಡು ಗಂಡು ಹೀಗೆ. ಮಂಗಳವಾರ, ಬುಧವಾರ ನೋಡಿಕೊಂಡು ಬರುತ್ತೇನೆ, ಹೊಟ್ಟೆಯ ಕರುಳುಗಳಲ್ಲವೇ ಅವು?'

'ಇದು ಎಂಥ ನಾಚಿಕೆಗೇಡಿತನ! ಇದೆ ಅವಳ ಧನದ ಉಗಮ ಸ್ಥಾನ ನಾಲ್ಕೂ ಕೂಸಿನ ನಾಲ್ಕು ತಂದೆಗಳು! ಅಂತೆಲೆ ಇಷ್ಟೊಂದು ತೆರವಿನ ರಾಸಿ! ರಾಯರೇ ಈಗ ನಾನೇನು ಮಾಡಬೇಕು? ಸೋಡಚೀಟಿ ಕೊಡಬೇಕೆಂದು ತಮ್ಮ ಹತ್ತಿರ ಬಂದಿರುವೆ ತಾವು ದಯವಿಟ್ಟು ನನ್ನನ್ನು ಪಾರುಮಾಡಬೇಕು' ಎಂದು ಬೇಡಿಕೊಂಡನು.

ಎಲ್ಲವನ್ನೂ ಸೂಕ್ಷ್ಮರೀತಿಯಿಂದವಲೋಕಿಸಿ ಒಳ್ಳೇ ಗಾಂಭೀರ್ಯದಿಂದ ವಕೀಲನು ಅವನಿಗೆ:

'ಅವೂ ನಿನ್ನ ಮಕ್ಕಳೆಂದೇ ಭಾವಿಸಬೇಕು; ಅಂದರೆ ಈಗುಂಟಾದ ತೊಂದರೆಯು ಪರಿಹಾರವಾಗುವದು' ಎಂದು ಉಪದೇಶಿಸಿದನು.

---

# ಮೋಯಿರೋನ್

ಪ್ರಾಂಥ್ಯುನಿಯಲ್ಲಿಯ ಜನರು ಮಾತುಮಾತಿಗೂ ಎಂ. ಮೆಲ್ರಾ ಯೋನನ ವಿಷಯದಲ್ಲಿ ಇನ್ನೂ ಮಾತಾಡುತ್ತಲೇ ಇರುತ್ತಾರೆ ಅವನು ರಾಜ್ಯಾಧಿಪತ್ಯದಲ್ಲಿ ಶ್ರೇಷ್ಠ ವಕೀಲನೆಂದು ಹೆಸರುವಾಸಿಯಾದವನು. ಅವನೊಮ್ಮೆ ಹೀಗೆಂದನು:

'ಒಮ್ಮೆ ಒಂದು ಬಲು ವಿಚಿತ್ರವಾದ ಸಂಗತಿಯು ಸಂಭವಿಸಿ ದುದು ತನಗೆ ಗೊತ್ತಿದೆ. ವಿಚಿತ್ರವೆಂದರೆ--ಎಲ್ಲ ದೃಷ್ಟಿಯಿಂದಲೂ ವಿಚಿತ್ರ ವೆಂಬುದನ್ನು ನೀವೂ ನೋಡಬಹುದು.

'ಆಗ್ಗೆ ನಾನು ಸರಕಾರಿ ವಕೀಲನಾಗಿದ್ದೆ; ಪ್ಯಾರೀಸದಲ್ಲ ನನ್ನ ತಂದೆಯವರೇ ಮೊದಲನೇ ಅಧ್ಯಕ್ಷರಾಗಿ ಚುನಾಯಿಸಲ್ಪಟ್ಟಿದ್ದರು. ಅವರ ಕೋರ್ಟಿನಲ್ಲಿಯೇ ನಾನೊಂದು ಖಟ್ಲೆಗಾಗಿ ಕೆಲಸ ನಡಿಸಿದೆನು 'ಶಾಲಾ ಮಾಸ್ತರನಾದ ಮೋಯಿರೋನನ ಸಂಗತಿ' ಎಂದು ಇಂದಿಗೂ ಅದು ಹೆಸರು ಪಡೆದಿದೆ; ಅದು ಅಂಥ ಖಟ್ಲೆಯು

'ಫ್ರಾನ್ಸಿನ ಉತ್ತರ ಪ್ರದೇಶದಲ್ಲಿ ಎಂ. ಮೋಯಿರೋನನು ಶಾಲಾ ಮಾಸ್ತರನು. ಸುತ್ತುಮುತ್ತಲಿನ ಹಳ್ಳಿಗಳಲ್ಲೆಲ್ಲ ಇವನ ಕೀರ್ತಿಯು ಹಬ್ಬಿ ಹರಡಿತ್ತು. ಮೋಯಿರೋನನು ವಿಚಾರವಂತನು, ಬುದ್ಧಿ ಶಾಲಿಯು, ಧಾರ್ಮಿಕನು, ಶಾಂತಮನುಷ್ಯನು. ಬೋಯಿಸ್ಲಿನಾಟ್ ಜಿಲ್ಹೆಯಲ್ಲಿ ಕೆಲಸಮಾಡುತ್ತಿರುವಾಗ ಅಲ್ಲಿಯೇ ಮದುವೆಯಾಯಿತು. ಅವನಿಗೆ ಮೂರು ಮಕ್ಕಳಾದುವು. ಒಂದರ ಹಿಂದೊಂದು ನಸಿಬೇನೆ ಯಿಂದ ಸಾವಿಗೆ ತುತ್ತಾದುವು. ತನ್ನ ಮಕ್ಕಳು ಕೈಬಿಟ್ಟು ಹೋದ ಮೇಲೆ, ತನ್ನ ಅಂಕಿತದಲ್ಲಿರುವ ಹುಡುಗರನ್ನು ಅವನು ತನ್ನ ಹೃದಯ ದೊಳಗೆ ಅಡಗಿಕೊಂಡಿದ್ದ ಎಲ್ಲ ಮೋಹ-ಮಮತೆಯಿಂದ ನೋಡಹತ್ತಿ ದನು. ಮುದ್ದು ಮಕ್ಕಳಿಗಾಗಿ ತನ್ನ ದುಡ್ಡಿನಿಂದಲೇ ಆಟಿಗೆಗಳನ್ನು ಕೊಂಡುಕೊಡುತ್ತಿದ್ದನು. ರುಚಿರುಚಿಯಾದ ತಿಂಡಿ-ತಿನಿಸುಗಳನ್ನು ದುಂದುಗಾರನಂತೆ ಹುಡುಗರಿಗೆ ಹಂಚುತ್ತಿದ್ದನು. ಪ್ರತಿಯೊಬ್ಬರೂ

ಇವನ ಮೃದು ಹೃದಯವನ್ನು ಕಂಡು ಆನಂದಿತರಾಗಿ ಕೊಂಡಾಡು ತ್ತಿರುವಷ್ಟರಲ್ಲಿ, ಯಾವದೂ ಒಂದು ಬೇನೆಯಿಂದ ಐದು ವಿದ್ಯಾರ್ಥಿಗಳು ಒಮ್ಮೆಲೆ ತೀರಿಕೊಂಡರು. ಅನಾವೃಷ್ಟಿಯ ಮೂಲಕ ನೀರು ಕೆಟ್ಟು ಸುಂಕುರೋಗವು ಹಬ್ಬಿ ಈ ಅನಾಹುತವಾಯಿತೆಂದು ಜನರು ನಂಬಿ ಬಿಟ್ಟರು. ಆದರೂ ಕಾರಣಕ್ಕಾಗಿ ಶೋಧಿಸಿದರು. ಯಾವ ಸುಳಿವೂ ಹತ್ತಲಿಲ್ಲ. ಬೇನೆಯ ಲಕ್ಷಣಗಳು ಮಾತ್ರ ಬಹಳೇ ವಿಚಿತ್ರವೆನಿಸಿದವು. ಹುಡುಗರು ಸುಸ್ತಾಗಿ ಮಲಗಿದವು; ಏನೂ ದಕ್ಕದಾಯಿತು ಹೊಟ್ಟೆ ಕಡಿತವೆಂದು ಗೋಳಿಟ್ಟು ಕಡೆಗೆ ವಿಲಿವಿಲಿ ಒದ್ದಾಡಿ ಪ್ರಾಣಬಿಟ್ಟವು.

'ಕಡೆಯ ಆಹುತಿಯ ಹೆಣದ ಪರೀಕ್ಷೆಯಾಯಿತು. ಆದರೂ ಏನೂ ಹೊರಡಲಿಲ್ಲ. ಕರುಳುಗಳನ್ನು ಪ್ಯಾರಿಸಕ್ಕೆ ಕಳಿಸಿ ಪೃಥಕ್ಕರಣ ಮಾಡಿಸಿದರು. ಆದರಲ್ಲಿ ಯಾವ ಮಾದಕ ದ್ರವ್ಯಗಳೂ ದೊರೆಯಲಿಲ್ಲ.

'ಒಂದು ವರುಷದ ವರೆಗೆ ಸಾವು ಸಂಭವಿಸಲಿಲ್ಲ. ಮುಂದೆ ನಾಲ್ಕೇ ದಿನಗಳಲ್ಲಿ ಮೋಯಿರೋನನ ಅತ್ಯಂತ ಪ್ರೀತಿಯ, ಬುದ್ಧಿಶಾಲಿ ಗಳಾದ ವಿದ್ಯಾರ್ಥಿಗಳಿಬ್ಬರು ತೀರಿಕೊಂಡರು. ಪರೀಕ್ಷೆಯಾಯಿತು; ಪ್ರತಿಯೊಂದು ದೇಹದ ಇಂದ್ರಿಯಗಳಲ್ಲಿ ಕಾಜಿನ ಪುಡಿಯು ದೊರೆತಿತು. ಸಿಹ್ಹಾಳಜಿಯಿಂದ ತಯಾರು ಮಾಡಿದ ಪದಾರ್ಥವನ್ನು ಆ ಹುಡುಗರು ಗೊತ್ತಾಗದೆ ತಿಂದಿರಬೇಕೆಂದು ಕಲ್ಪಿಸಿದರು. ಹಾಲಿನ ಪಾತ್ರೆಯ ಮೇಲೆ, ಒಡೆದು ಬಿದ್ದ ಕಾಜಿನ ಚೂರುಗಳು ಈ ಅಕಲ್ಪಿತ ಅನಾಹುತಕ್ಕೆ ಕಾರಣ ವುಂಟಾಗಿರಬಹುದು; ಯಾಕೆಂದರೆ ಇದೇ ಹೊತ್ತಿಗೆ ಮೋಯಿರಾನನ ತೊತ್ತೂ ಬೇನೆ ಬಿದ್ದದ್ದರಿಂದ ಹಾಗೆ ಭಾವಿಸಲು ಆಸ್ಪದವಾಗಿತ್ತು. ಹುಡುಗರ ಬೇನೆಯ ಲಕ್ಷಣವೇ ಇವಳಿಗೂ ಆಗಿರುವದೆಂದು ವೈದ್ಯರು ಚಿಕಿತ್ಸೆಯಿಂದ ನಿರ್ಣಯಿಸಿದರು. ಮಾಸ್ತರನು ಹುಡುಗರಿಗಾಗಿ ತಂದಿದ್ದ ತಿನ್ನುವ ಪದಾರ್ಥಗಳಲ್ಲಿ ಕೆಲವನ್ನು ಕದ್ದು ತಿಂದಿರುವಳೆಂಬ ಅವಳ ಒಪ್ಪಿಗೆ ಯನ್ನೂ ಕಡೆಗೆ ದೊರಕಿಸಿದರು.

'ಕೋರ್ಟಿನ ಅಪ್ಪಣೆಯ ಮೇರೆಗೆ ಶಾಲೆಯನ್ನು ಶೋಧಿಸಿದರು. ಮಕ್ಕಳ ಆಟಿಗೆ, ತಿಂಡಿ-ತಿನಿಸುಗಳಿಂದ ತುಂಬಿದ ಒಂದು ಕಿರುಮನೆಯು

ದೊರೆತಿತು ಈ ತಿನ್ನತಕ್ಕ ಎಲ್ಲ ಪದಾರ್ಥಗಳಲ್ಲಿ ಕಾಜಿನ ಪುಡಿಯೂ, ಸಣ್ಣ ಸಣ್ಣ ಸೂಜಿಯ ತುಣುಕುಗಳೂ ಬೆರಿಕೆಯಾಗಿದ್ದವೆಂದು ಕಂಡು ಬಂದಿತು.

'ಮೋಯಿರೋನನನ್ನು ಕೈದು ಮಾಡಲು ತಡಹಿಡಿಯಲಿಲ್ಲ. ವಿಮೋಚನೆಯಾಗುವ ಸಂಶಯವಿಲ್ಲದ ಭಾವದಿಂದ ಅವನು ಅಂಜಿದ್ದನು; ಸಿಟ್ಟಿಗೆದ್ದವನಂತೆ ಕಾಣುತ್ತಿದ್ದನು. ಅವನು ಈ ವರೆಗೆ ಗಳಿಸಿದ ಹೆಸರು, ಕೋಮಲ ಹೃದಯ, ಎಳೆ ಮಗುಗಳ ಮೇಲೆ ಅವನು ಬಿದ್ದು ಸಾಯು ತ್ತಿದ್ದ ಮಮತೆ ಮೊದಲಾದವುಗಳ ಮೇಲಿಂದ ನೋಡಿದರೆ ಇಂಥ ಭ್ರೂಣಹತ್ಯಾ ದೋಷವನ್ನು ಮಾಡಿರಬಹುದೇ ಎಂಬ ಸಂಶಯವು ಕೂಡ ಬರಲು ಯಾವ ಸಂಭವವೂ ಇದ್ದಿಲ್ಲ. ಹಾಗಾದರೆ ಈ ಪ್ರತ್ಯಕ್ಷ ಪ್ರಮಾಣ ಗಳು ದೊರೆತಿರಲಿಕ್ಕೆ ಇವನ ಮೇಲಿದ್ದ ನನ್ನ ಮೊದಲಿನ ನಂಬಿಗೆಯು ಇನ್ನೂ ಹೋಗಲಾರದೇಕೆಂಬ ವಿಚಾರಗಳ ತಾಕಲಾಟದಿಂದ ನಾನು ಗೊಂದಲಗೆಟ್ಟೆನು.

'ತನ್ನ ಹೊಟ್ಟೆಯ ಮಕ್ಕಳಿಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದ ಕಂದಮ್ಮಗಳನ್ನು ಇಂಥ ಸರಳ, ಸುಸ್ವಭಾವದ, ಧಾರ್ಮಿಕ ಮನುಷ್ಯ ನಾದ ಇವನು ಯಾಕೆ ಕೊಂದಿರಬಹುದು ? ತನಗೆ ಬರುವ ಸಂಬಳವನ್ನೆಲ್ಲ ವೆಚ್ಚಮಾಡಿ ಆಟಿಗೆಗಳನ್ನು ಕೊಂಡುಕೊಟ್ಟು, ತಿಂಡಿ-ತಿನಿಸುಗಳನ್ನು ಉಣಿಸಿ ತಿನಿಸಿ, ಯಾವ ಹುಡುಗರನ್ನು ಕಂಡು ಆನಂದ ಪಡುತ್ತಿದ್ದನೋ ಅಂಥ ಹುಡುಗರನ್ನೇ ಕೊಲ್ಲಲು ಆಯ್ದುಕೊಂಡನೇಕೆ ?

'ಇದೆಲ್ಲವನ್ನು ಒಪ್ಪಿಕೊಳ್ಳಬೇಕಾದರೆ, ಅವನು ಹುಚ್ಚನಾಗಿ ಬಿಟ್ಟಿರಬೇಕೆಂದು ಗ್ರಹಿಸಬೇಕಾಗುವದು. ಆದರೆ ಅವನ ಶಾಂತವಾದ ಮುಖಚರ್ಯೆ, ವಿವೇಕತನ ಮೊದಲಾದ ಲಕ್ಷಣಗಳುಳ್ಳ ಈ ಮನುಷ್ಯ ನಲ್ಲಿ ಹುಚ್ಚುತನವನ್ನು ಆರೋಪಿಸುವದು ಅಸಾಧ್ಯವಾದ ಮಾತೆಂದು ಯಾರೂ ಹೇಳಬಹುದು.

'ಪುರಾವೆಗಳ ಸಂಗ್ರಹವು ನಡೆಯಿತು. ಆದರೇನು ! ಮೋಯಿ ರೋನನು ಕೊಂಡುಕೊಳ್ಳುತ್ತಿದ್ದ ಅಂಗಡಿಯೊಳಗಿನ ಎಲ್ಲ ಸಾಮಾನು

ಗಳನ್ನು ಪರೀಕ್ಷಿಸಿದರು. ಯಾವ ತರದ ಸಂಶಯವೂ ಆ ಸಾಮಾನು ಗಳಲ್ಲಿ ಕಂಡುಬರಲಿಲ್ಲ.

‘ ಯಾರೋ ತನಗಾಗದವರು ತನ್ನ ಕಿರುಮನೆಯ ಬೀಗವನ್ನು ತೆರೆದು ಸೂಜಿಯ ತುಣುಕು, ಕಾಜಿನ ಪುಡಿಯನ್ನು ಆ ತಿನ್ನುವ ಜೀನಸಿನಲ್ಲಿ ಬೆರೆಸಿರಬೇಕೆಂದು ಅವನು ಹೇಳಿದನು. ತನ್ನ ಮೇಲೆ ಈ ಅಪರಾಧವು ಬರದಂತೆ ವಾರಸಾಹಕ್ಕಿಗಾಗಿ ಕೂಸನ್ನು ಕೊಲ್ಲಲು ಹೆಣಗಾಡಿದ ಒಬ್ಬ ಒಕ್ಕಲಿಗನ ಕಥೆಯೊಂದನ್ನು ಹುಟ್ಟಿಸಿ ಹೇಳಿದನು. ಇಂಥ ಪಶುವಿಗೆ ಬೇರೆಯವರ ಮಕ್ಕಳ ಹಿತವೇನು ಗೊತ್ತು ! ಎಂದು ಉಪದೇಶಕರವಾದ ಮಾತುಗಳನ್ನಾಡಿದನು.

‘ ಇದು ಸಂಭವವೆಂದು ತೋರಿತು. ಮತ್ತೆರಡು ನಿಜವಾಗಿ ಕಾಣುವ ಪುರಾವೆಗಳು ಸಿಗದಿದ್ದರೆ ಸಂಶಯವಿಲ್ಲದೆ ಅವನನ್ನು ನಾವು ಮುಕ್ತ ಮಾಡಬಹುದಾಗಿತ್ತು. ಕಾಜಿನ ಪುಡಿಯಿಂದ ತುಂಬಿದ ನಸ್ಯದ ಡಬ್ಬಿ ಮೊದಲನೆಯದು ! ಇವನು ತನ್ನ ಹಣವನ್ನು ಇಡುತ್ತಿದ್ದ ಡೆಸ್ಕಿನ ಡ್ರಾಅರದೊಳಗೆ ಅದು ಸಿಕ್ಕಿತು. ಡಬ್ಬಿಯು ತನ್ನದೆಂದೂ ಅವನು ಒಪ್ಪಿಕೊಂಡನು.

‘ ಇದು ಇಷ್ಟೆಲ್ಲವನ್ನು ಮಾಡಿದ ಆ ಸಿಗದ ಅಪರಾಧಿಯ ಕಟ್ಟಕಡೆಯ ತಂತ್ರವಿರಬೇಕೆಂದು ತನಗೆ ಅಪರಾಧವು ಸಂಬಂಧಪಟ್ಟೆಲ್ಲೆಂಬ ಬಿಂಕದಿಂದ ಅವನು ಹೇಳಿದನು. ಸಾಕ್ಷಿಗಾಗಿ ಸ್ಟೇಶನರಿ ಅಂಗಡಿಯವನನ್ನೂ ಕರೆದು ತಂದಿದ್ದರು. ಸೂಜಿಗಳನ್ನು ತುಣುತುಣುಕು ಮಾಡಿ ನೋಡಿ ಒಳ್ಳೆಯವೆಂದು ಕಂಡುಬಂದ ಮೇಲೆ ನೋಯಿರೋನನು ತನ್ನ ಅಂಗಡಿಯಲ್ಲಿ ಸೂಜಿಗಳನ್ನು ಕೊಂಡುಕೊಳ್ಳುತ್ತಿದ್ದನೆಂದು ಆತನು ನ್ಯಾಯಾಧೀಶರ ಮುಂದೆ ಹೇಳಿದನು.

‘ ಆ ಅಂಗಡಿಯವನು ಹತ್ತು–ಹನ್ನೆರಡು ಸಾಕ್ಷೀದಾರರನ್ನು ಕರೆದುಕೊಂಡು ಬಂದಿದ್ದನು. ನೋಯಿರೋನನೇ ಅಂಗಡಿಗೆ ಬಂದು ಸೂಜಿಗಳನ್ನು ಒಯ್ಯುತ್ತಿದ್ದುದನ್ನು ತಾವು ಕಣ್ಣಾರೆ ಕಂಡಿದ್ದೇವೆಂದು ಅವರೂ ಸಾಕ್ಷಿಕೊಟ್ಟರು.

‘ ಇನ್ನು, ಈ ತಿನ್ನುವ ಪದಾರ್ಥಗಳ ಬಗೆಗಾಗಲಿ, ಮಾಸ್ತರನೇ ಆ ಮಕ್ಕಳಿಗೆ ತಿನಿಸುತ್ತಿದ್ದನೆಂಬುದನ್ನು ಯಾರಾದರೂ ನೋಡಿದ್ದರೆ ಅವರನ್ನೂ ಸಾಕ್ಷಿಗಾಗಿ ಕರೆಯಬೇಕೆಂದು ನಾನು ಅಪ್ಪಣೆ ಮಾಡಿದೆನು.

‘ ಹೀಗೆ ಇದರಲ್ಲಿಯೇ ಕಾಲವು ಅಪವ್ಯಯವಾಗುವದೆಂದೂ, ಇವನೇ ಅಪರಾಧಿಯೆಂದು ಇಷ್ಟರ ಮೇಲೆ ಸಿದ್ಧವಾಗಿರುವದೆಂದೂ, ಅವನಿಗೆ ದೇಹಾಂತ ಶಿಕ್ಷೆಯನ್ನೇ ಕೊಡಬೇಕೆಂದು ನ್ಯಾಯಾಧೀಶನಲ್ಲಿ ಊರಿಗೇ ಊರೇ ಬೇಡಿಕೊಂಡಿತು.

‘ ಮೋಯಿರೋನನಿಗೆ ದೇಹಾಂತ ಶಿಕ್ಷೆಯಾಯಿತು. ಮೇಲಿನ ಕೋರ್ಟಿನವರು ಅರ್ಜಿಯನ್ನು ಹಿಡಿಯಲಿಲ್ಲ. ಅವನನ್ನು ಕ್ಷಮಿಸಲು ಯಾವ ಹಾದಿಯೂ ಉಳಿಯಲಿಲ್ಲ. ತಕ್ಕ ಶಿಕ್ಷೆಯಾಯಿತೆಂದು ಬಾದ ಶಹರೂ ಅಂದರೆಂಬ ಮಾತು ನನಗೆ ನನ್ನ ತಂದೆಯಿಂದ ತಿಳಿದು ಬಂದಿತು.

‘ ಒಂದಿನ ಮುಂಜಾನೆ ಕಚೇರಿಯಲ್ಲಿ ನಾನು ನನ್ನ ಕೆಲಸದಲ್ಲಿ ತೊಡಗಿದಾಗ್ಗೆ ತುರಂಗದ ಶಿಪಾಯಿಯು ಒಬ್ಬ ಪಾದ್ರಿಯೊಡನೆ ಒಳ ಬಂದನು. ಅವನೊಬ್ಬ ಪಾದ್ರಿ, ಮುದುಕ. ಅಪರಾಧಿಗಳ ಅಂತರ್ಗತವು ಇವನಿಗೆ ಪೂರ್ಣ ಗೊತ್ತಾಗಿತ್ತು. ಮನುಷ್ಯರ ಸ್ವಭಾವದ ಪರಿಚಯವನ್ನು ಪೂರ್ಣ ಬಲ್ಲವನಾಗಿದ್ದನು. ಇವನು ದುಃಖಿತನಾಗಿದ್ದನೆಂದು ಅವನ ಮುಖವೆ ಹೇಳುವಂತಿತ್ತು.

‘ ಆ ಮಾತು ಈ ಮಾತು ಆಡಿ, ಏಳುತ್ತೇಳುತ್ತ ‘ಮೋಯಿರೋನನ ತಲೆ ಹೊಡಿಸಿದರೆ–ನೀವು ನಿರಪರಾಧಿಯ ಜೀವವನ್ನು ತೆಗೆದುಕೊಂಡಂತಾ ಗುವದು ’ ಎಂದು ಅವನು ಒಮ್ಮೆಲೆ ಅಂದನು.

‘ ನನಗೆ ನಮಸ್ಕಾರ ಸಹ ಮಾಡದೆ ಅವನು ಹೊರಟು ಹೋದನು. ಆತನಾಡಿದ ಮಾತಿನರ್ಥವೇನಿರಬೇಕೆಂಬ ದೀರ್ಘವಿಚಾರದಲ್ಲಿ ನಾನು ಬಿದ್ದೆನು. ಒಂದು ಜೀವವು ಬದುಕಲಿ ಎಂಬ ಅಂತಃಕರಣದಿಂದ, ದಯಾರ್ದ್ರದೃಷ್ಟಿಯಿಂದ ಅವನು ಮಾತಾಡಿರಬಹುದೆಂದು ನಾನು ಕಲ್ಪಿಸಿದೆನು.

‘ ಮುಂದೆ ಒಂದು ತಾಸಿನ ಮೇಲೆ ನಾನು ಪ್ಯಾರಿಸದ ದಾರಿ

ಹಿಡಿದೆ. ಬಾದಶಹನ ದರುಶನವನ್ನು ಆದಷ್ಟು ಬೇಗನೆ ಮಾಡಿಸಿಕೊಡಬೇಕೆಂದು ನನ್ನ ತಂದೆಯನ್ನು ನಾನು ಬಿನ್ನವಿಸಿಕೊಂಡಿದ್ದೆನು

'ಮರುದಿನ ಮುಂಜಾನೆ ದರುಶನವಾಯಿತು ಆಗ ಬಾದಶಹನಾದ ೩ನೇ ನೆಪೋಲಿಯನ್ನನು ಒಂದು ಚಿಕ್ಕ ಕೋಣೆಯಲ್ಲಿ ಏನೋ ಕೆಲಸದಲ್ಲಿದ್ದನು. ನಾನು ಎಲ್ಲ ಕಥೆಯನ್ನು ಕಥೆಮಾಡಿ ಹೇಳಿದೆ–ಆ ಪಾದ್ರಿಯು ಬಂದು ಆಡಿದ ಮಾತುಗಳನ್ನೂ ಬಿಡಲಿಲ್ಲ. ಇನ್ನೂ ಕಥೆ ಹೇಳುತ್ತಲೇ ಇದ್ದೆ. ಅಷ್ಟರಲ್ಲಿ ಬಾದಶಹನು ಒಬ್ಬನೇ ಇರುವನೆಂದು ಬಗೆದು ರಾಣಿಯು ಒಳಬಾಗಿಲವನ್ನು ತೆರೆಯುತ್ತ ಅಲ್ಲಿಗೆ ಬಂದುಬಿಟ್ಟಳು ಬಾದಶಹನು ರಾಣಿಯನ್ನು ಸಲಹೆಗಾಗಿ ವಿಚಾರಿಸಿದನು. 'ಈ ಮನುಷ್ಯನನ್ನು ಕ್ಷಮಿಸಬೇಕು ! ಕ್ಷಮಿಸಲೇಬೇಕು, ಯಾಕಂದರೆ ನಿರಪರಾಧಿ' ಎಂದು ರಾಣಿಯು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದಳು.

'ಈ ಹೆಣ್ಣುಮಗಳ ಮನಗಾಣಿಕೆ ಇಷ್ಟು ಉದಾರು, ಉದಾತ್ತವಾಗಿ ಕೂಡಲೆ ಏಕೆ ಪರಿಣಮಿಸಿತೆಂಬ ದೊಡ್ಡ ಚಿಂತೆಯು ನನ್ನನ್ನು ಬಾಧಿಸಹತ್ತಿತು.

'ಅವನ ಶಿಕ್ಷೆಯನ್ನು ಬದಲಾಯಿಸಬೇಕೆಂದು ನಾನು ತವಕಪಡುತ್ತಿದ್ದೆ. ತನ್ನ ಪಕ್ಷವನ್ನು ಮಂಡಿಸಲು, ಯಾವನು ಪಾದ್ರಿಯನ್ನು ಕಳಿಸಿದ್ದನೋ ಅಂಥ ಚಮತ್ಕಾರವುಳ್ಳ ಅಪರಾಧಿಯು ಸೂತ್ರದ ಬೊಂಬೆಯಾಗಿರುವೆನೆಂದು ನಾನು ಭಾವಿಸಿಕೊಂಡೆನು.

'ರಾಜದಂಪತಿಗಳಲ್ಲಿ ನಾನು ಅನುಮಾನವನ್ನು ವ್ಯಕ್ತಪಡಿಸಿದೆ. ಬಾದಶಹನು ತನ್ನ ಸಹಜ ಸ್ವಭಾವದ ಒತ್ತಾಯದಿಂದ ನಿರ್ಧಾರವನ್ನು ಹೇಳಲಾರದೆ ಸುಮ್ಮನಿದ್ದನು. ಹುಡುಗರನ್ನು ಕೊಂದಂಥ ನೀಚ ಅಪರಾಧಿಯ ಬಿಡುಗಡೆ ಮಾಡಿದ ಜನಾಪವಾದವೊಂದು ಕಡೆ ಅವನಿಗೆ ಬಾಧಿಸುತ್ತಿರಲು ಸಾಕು. ಆದರೆ ಪಾದ್ರಿಯು ಹೇಳಿದುದು ದೇವಾಜ್ಞೆಯೆಂದು ಸಾಮ್ರಾಜ್ಞಿಯು ಬಾದಶಹನಿಗೆ ಮನವರಿಕೆ ಮಾಡಿಕೊಟ್ಟಳು. 'ಏನಾಯಿತು – ನಿರಪರಾಧಿಯನ್ನು ಕೊಲ್ಲುವದಕ್ಕಿಂತಲೂ ಅಪರಾಧಿಯನ್ನುಳಿಸುವದು ಮೇಲು. ಎಂದು ಮತ್ತೆ ಹೇಳಿದಳು ಅವಳ

ಉಪದೇಶವು ಗೆದ್ದಿತು. ದೇಹಾಂತ ಶಿಕ್ಷೆಯು ಬದಲು ಸಶ್ರಮಶಿಕ್ಷೆ ಯೆಂದು ಬದಲಾವಣೆಯಾಯಿತು.

‘ ಮೋಯಿರೋನನು ಸೆರೆಮನೆಯ ಮೇಲ್ವಿಚಾರಕನ ಆಳಾಗಿ ನಿಯಮಿಸಲ್ಪಟ್ಟಿರುವನೆಂದು ಕೆಲವು ದಿನಗಳ ಮೇಲೆ ನನಗೆ ಸುದ್ದಿಯು ಬಂದಿತು. ಟೋಲೋನದಲ್ಲಿ ಅವನು ಮಾದರಿಯ ಸುಸ್ವಭಾವದವನಾಗಿ ಎಲ್ಲರ ಬಾಯಲ್ಲಿರುವನೆಂಬ ಮಾತೂ ಬಾದಶಹನ ಕಿವಿಯ ವರೆಗೆ ಹೋಗಿ ಮುಟ್ಟಿತ್ತು. ಆ ಮೇಲೆ ಮಾತ್ರ ಬಹುದಿನಗಳ ವರೆಗೆ ಅವನ ಸುದ್ದಿಯೇ ನನಗಿರಲಿಲ್ಲ

‘ ಇದಾದ ಎರಡು ವರ್ಷಗಳ ಮೇಲೆ ಬೇಸಿಗೆಯನ್ನು ಕಳೆಯಲು ಡಿಲಾರಿಲೆಯಲ್ಲಿಯ ನನ್ನ ಕಕ್ಕನ ಮನೆಗೆ ನಾನು ಹೋಗಿದ್ದೆನು. ಒಂದು ದಿನ ಸಂಜೆಯಲ್ಲಿ ನಾವು ಮೇಜವಾನಿಯ ಸಂಭ್ರಮದಲ್ಲಿದ್ದಾಗ ನನ್ನೊಡನೆ ಮಾತನಾಡಬೇಕೆಂಬ ಇಚ್ಛೆಯಿಂದ ಒಬ್ಬ ತರುಣ ಪಾದ್ರಿಯು ಬಂದಿರುವನೆಂದು ನನಗೆ ಸುದ್ದಿಯು ಬಂದಿತು.

‘ ನಾನು ಅವನಿಗೆ ಒಳಗೆ ಬರಲು ಹೇಳಿಕಳಿಸಿದೆನು. ಅವನು ನನ್ನನ್ನು ಕಂಡು ಸಾಯಲಾಗಿರುವ ಒಬ್ಬ ಮನುಷ್ಯನ ಹತ್ತಿರ ಬರ ಬೇಕೆಂದು ನನ್ನನ್ನು ಬಿನ್ನವಿಸಿಕೊಂಡನು ಈಗ ನಾನು ಪ್ರಜಾಸತ್ತೆಯಿಂದ ದೂರ ಇಡಲ್ಪಟ್ಟಿರುವೆನಾದರೂ ಬಹು ವರುಷಗಳ ವರೆಗೆ ನ್ಯಾಯಾಧೀಶನಾಗಿ ಕೆಲಸ ಮಾಡಿದ್ದೆನಾದ್ದರಿಂದ ಇಂಥ ಹಲವು ಪ್ರಸಂಗಗಳು ಮೇಲಿಂದಮೇಲೆ ನನಗೆ ಬರುತ್ತಿದ್ದವು. ಈಗಲಾದರೂ ಅಂಥ ಪ್ರಸಂಗಕ್ಕೆ ನಾನು ಹೋಗಲೇಬೇಕಾಯಿತು.

‘ ನಾನು ಆ ಪಾದ್ರಿಯ ಬೆನ್ನುಹತ್ತಿ ಸಾಗಿದೆನು. ಒಬ್ಬ ಯಂತ್ರಗಳ ಕಾರಖಾನೆಯ ಯಜಮಾನನ ದೊಡ್ಡ ಮನೆಯ ಕೆಳಬದಿಗಿರುವ ಅನಾರೋಗ್ಯಕರವಾದ ಮುರುಕಲ ಗುಡಿಸಲಕ್ಕೆ ಕರೆದೊಯ್ದನು ಅಲ್ಲಿ, ಹುಲ್ಲಿನ ಹಾಸಿಗೆ ಹಾಸಿತ್ತು. ಉಸಿರಾಡಿಸಲು ಸುಲಭವಾಗಲೆಂದು ಗೋಡೆಗೆ ಬೆನ್ನು ಹಚ್ಚಿ ಕಾಲು ಚಾಚಿಕೊಂಡು ಕುಳಿತ ಸಾಯಲಾದ

ಮನುಷ್ಯನೊಬ್ಬನು ನನ್ನ ಕಣ್ಣಿಗೆ ಬಿದ್ದನು. ಕಣ್ಣು ಒಳಸಿಕ್ಕಿದ್ದವು; ಸಾವಿನ ಕಳೆಯು ಒಡೆದು ಕಾಣುತ್ತಿತ್ತು.

'ನನ್ನ ಪರಿಚಯವಿದೆಯೇ?' ಎಂದು ನನ್ನನ್ನು ಕಂಡೊಡನೆ ಅವನು ಗೊಣಗುಟ್ಟಿದನು.

'ಇಲ್ಲ'

'ನಾನೇ ಆ ಮೋ....ಯಿ....ರೋ....ಸ್'

'ಹೋ, ಆ ಶಾಲಾ ಮಾಸ್ತರ್' ಎಂದು ನಾನಂದೆ

'ಹೌದು'

'ನೀನು ಇಲ್ಲಿ ಹೇಗೆ ಬಂದಿ?'

'ಅದೆಲ್ಲ ದೊಡ್ಡ ಕಥೆಯಿದೆ. ನನಗೆ ನೆನಪಿಲ್ಲ—ಇನ್ನು ನನ್ನದು ತೀರಿತು. ಯಾರೋ ಈ ಪಾದ್ರಿಯನ್ನು ಕರೆತಂದಿದ್ದಾರೆ. ನೀವು ಇಲ್ಲಿರುವಿರೆಂದು ನಾನು ಕೇಳಿ ಇವನನ್ನು ನಿಮ್ಮ ಕಡೆಗೆ ಕಳಿಸಿಕೊಟ್ಟೆನು. ನನಗೆ ಇಷ್ಟು ದಿನ ಜೀವದಾನಕೊಟ್ಟ ನಿಮ್ಮಲ್ಲಿ ನಾನು ಸತ್ಯವನ್ನು ಪ್ರಕಟಿಸಬೇಕೆನ್ನುತ್ತೇನೆ.

'ಒಣಗಿ ಹೋದ ಕೈಗಳಿಂದ ಹಾಸಿಗೆಯ ಹುಲ್ಲುಕಡ್ಡಿಯನ್ನು ಹಿಡಿದು ತೇಕುವ ದನಿಯಲ್ಲಿ ಅವನು ಹೇಳತೊಡಗಿದನು :

'ಅಲ್ಲಿ....ಆಗಲಿಲ್ಲ. ಈಗ ಸತ್ಯವನ್ನು ಪ್ರಮಾಣಪೂರ್ವಕವಾಗಿ ಪ್ರಕಟಮಾಡುತ್ತೇನೆ; ಯಾಕಂದರೆ ಈ ಲೋಕವನ್ನು ಬಿಡುವ ಮೊದಲು ಯಾರಾದರೊಬ್ಬರ ಮುಂದೆ ಸತ್ಯವನ್ನು ಹೇಳುವದು ಅವಶ್ಯವೆನಿಸಿದೆ; ಉಚಿತವೆನಿಸಿದೆ.

'ನಾನೇ— ಆ ಕಂದಮ್ಮಗಳನ್ನು ಕೊಂದವನು— ನಾನು –ಎಲ್ಲ– ಹುಡುಗರನ್ನು ಸೇಡು ತೀರಿಸಿಕೊಳ್ಳಲು!

'ಕೇಳಿರಿ. ನನ್ನಂಥ ಪ್ರಾಮಾಣಿಕ ಮನುಷ್ಯನೆಂದರೆ ನಾನೇ ಎಂದು ಹೆಮ್ಮೆಯಿಂದ ಹೇಳುತ್ತೇನೆ.. ನನ್ನಂಥವರು ಹುಡುಕಿದರೂ ಯಾರೂ ಸಿಗಲಾರರು.. ದೇವಭಕ್ತನು . ಒಳ್ಳೇ ದೇವರು.. ಯಾವ ದೇವನೇ

ಪ್ರೀತಿಸಬೇಕೆಂದು ಕಲಿಸುತ್ತಾನೋ . . ಅಂಥ ದೇವರು .... ಸುಳ್ಳು ದೇವರಲ್ಲ . . ನಾನೆಂದೂ ತಪ್ಪು ಮಾಡಿದವನಲ್ಲ. ಬಲು ಪುನೀತನಿದ್ದೆ.

' ಹೀಗಿರುತ್ತಿರುವಾಗ ಮದುವೆಯಾಯಿತು; ಮಕ್ಕಳಾದವು. ಯಾವ ತಂದೆ ತಾಯಂದಿರು ಎಂದೂ ಪ್ರೀತಿಸದಂಥ ಪ್ರೀತಿಯಿಂದ ನಾನು ಅವುಗಳನ್ನು ಪ್ರೀತಿಸಹತ್ತಿದೆ. ಅವುಗಳಿಗಾಗಿ ನಾನು ಇದ್ದೆ. ನಾನು ಪಾಪಿ–ಅವೆಲ್ಲವೂ ಸತ್ತವು; ಮೂರೂ ಹೋದವು. ಯಾಕೆ ? ಯಾರಿಗೆ ಗೊತ್ತು ? ನಾನೇನು ಮಾಡಿದ್ದೆ ? ನನ್ನ ಅಂತಃಕರಣವು ಅಂದಿನಿಂದ ಬದಲಾಯಿತು; ತೀರ ವಿಚಿತ್ರತರವಾಗಿ ಬದಲಾಯಿತು. ಕನಸಿನಿಂದ ಒಮ್ಮೆಲೆ ನಾನು ಕಣ್ಣು ತೆರೆದೆ. ದೇವರು ನೀಚಸಿರುವನೆಂದು ಭಾವಿಸಿದೆನು. ಅವನೇಕೆ ನನ್ನ ಮಕ್ಕಳನ್ನು ಕೊಲ್ಲಬೇಕು? ಅವುಗಳನ್ನು ಕೊಲ್ಲಲು ಅವನಿಗೆ ಆನಂದವಿದೆಯೆಂದು ನನ್ನ ಅಂತರ್‌ದೃಷ್ಟಿಗೆ ಹೊಳೆಯಿತು ಎಳೆಮಕ್ಕಳೆಂದರೆ ಅವನಿಗೆ ಅಮೃತ. ದಾನಮಾಡುವದು ಪ್ರತಿದಾನದ ದುರುದ್ದೇಶದಿಂದಲ್ಲವೇ ! ದೇವನು ಕೊಲೆಗಾರ–ಪಾತಕಿ; ಹೌದು! ಪ್ರತಿದಿನವೂ ಸಾವಿನ ಎಡೆಯಿಲ್ಲದೆ ಅವನು ಜೀವಿಸಲಾರನು. ಹಲವು ಹಾದಿಗಳಿಂದ ಸಾವಿನ ಬಲಿಯನ್ನು ಬೀಸುವನು. ಮೋದಪಡುವನು. ರೋಗರಾಯಿಗಳನ್ನು ನಿರ್ಮಿಸಿದ್ದಾನೆ— ಪ್ಲೇಗ, ಕಾಲರಾ, ವಿಷಮಜ್ವರ, ಶೀತ, ವಾತ, ಪಿತ್ತ ಮೊದಲಾದವು. ನೈವೇದ್ಯಕ್ಕಾಗಿ ದಾರಿಕಾಯುತ್ತ ಕುಳಿತುಕೊಳ್ಳುವದು ಬೇಸರಾಯಿತೆಂದರೆ–ತಾತ್ಕಾಲಿಕ ಅಪಾಯಗಳ ಉಪಾಯವನ್ನು ಂಟು ಮಾಡಿಕೊಂಡಿದ್ದಾನೆ. ಇನ್ನೂ ಎಷ್ಟೆಷ್ಟು ಅವನ ಹಂಚಿಕೆಗಳಿರುವವೋ ಎಲ್ಲವೂ ಗೊತ್ತಾಗುವದು ಅಸಾಧ್ಯವಾದ ಮಾತು.

' ಇಷ್ಟೆಲ್ಲವೂ ಸಾಕಾಗಲಾರದೆ ಹೊಟ್ಟೆಹರಿದ, ಕಾಲು ಮುರಿದ' ರುಂಡ ಹಾರಿದ ಎಂಟು ಹತ್ತು ಸಾವಿರ ಸೈನಿಕರ ರಕ್ತವು ಸಿಗಲೆಂದು ಕಾಲಕಾಲಕ್ಕೆ ಯುದ್ಧಗಳನ್ನು ಹೂಡುವನು.

' ಇದಿಷ್ಟೇ ಎಂದಿರಾ–ಅಲ್ಲ–ಇನ್ನೂ ಇದೆ. ಜೀವವನ್ನು ತಿಂದು ಜೀವಿಸುವ ನರಪಿಶಾಚಿಗಳನ್ನು ಹುಟ್ಟಿಸಿದ್ದಾನೆ. ತನಗಿಂತ ಮನುಷ್ಯರು ಹೆಚ್ಚಿನವರಾದರೆ, ಪಶುಗಳನ್ನು ನಿರ್ಮಿಸಿದ್ದಾನೆ–ಅವರಿಗಾಗಿ ಪರಸ್ಪರ

ಮಾರಕ ಜೀವಿಗಳಿಂದು. ಒಂದು ದಿನ ಬದುಕುವಂಥವು, ಕ್ಷಣಕಾಲ ಜೀವಿಸುವಂಥವು, ಹುಟ್ಟಿದೊಡನೆ ಸಾಯುವಂಥ ನೊಣ, ನೊರಜು ಮೊದಲಾದ ಅತ್ಯಲ್ಪ ಜೀವಿಗಳನ್ನು ಗಣಿಸಲಾರದಷ್ಟು- ಕಲ್ಪನಾತೀತವಾದ ಅಸಂಖ್ಯ-ರಾಶಿಗಳನ್ನೇ ಜಗದಲ್ಲಿ ಹುಟ್ಟಿಸಿದ್ದಾನೆ ಒಂದನ್ನು ಒಂದು ಕೊಂದರೆ, ಅದನ್ನು ಮತ್ತೊಂದು ಕೊಲ್ಲುವದು, ಮತ್ತದಕ್ಕೆ ಮಗುದೊಂದು. ಹೀಗೆ ಒಂದಕ್ಕೊಂದು ಮಾರಕಗಳಾಗಿ ಕಡೆಗೆಲ್ಲವೂ ಲಯವಾಗುವಂಥ ನಾನಾವಿಧಗಳನ್ನು ನಿರ್ಮಿಸಿದ ಅವನ ರಚನಾ ಕೌಶಲ್ಯವು ಅಗಾಧವಾದುದಾಗಿದೆ. ಈ ಒಳ್ಳೆ ದೇವನು ! ಎಲ್ಲವನ್ನು ನೋಡುತ್ತಾನೆ, ಮೋದಪಡೆಯುತ್ತಾನೆ. ಮಹತೋ ಮಹೀಯಾನ್, ಅಣೋರಣೀಯಾನ್. ಎಲ್ಲವನ್ನು ಕಣ್ಣುತೆರೆದು ನೋಡುತ್ತಿರುತ್ತಾನೆ! ಹಂ ! ದೇವ-ಪಶು.

‘ ಹಾಗೆ, ನಾನು ಕೆಲವು ಹುಡುಗರನ್ನು ಕೊಂದಿದ್ದೇನೆ ನಾನು ಅವನ ಮೇಲೆ ಈ ತಂತ್ರವನ್ನು ಪಯೋಗಿಸಿದ್ದೇನೆ. ಅವುಗಳನ್ನು ಪಡೆದವನು ಅವನಲ್ಲ-ನಾನು-ನಾನೆ ಪಡೆದುದು. ಇನ್ನೂ ಹೆಚ್ಚಿಗೆ ಬಲಿ ತೆಗೆದು ಕೊಳ್ಳುತ್ತಿದ್ದೆ; ಆದರೆ ನೀವು ನನ್ನನ್ನು ಬಂಧಿಸಿದಿರಿ. ಮುಗಿಯಿತು ಇಷ್ಟೆ.

‘ ನಾನು ನೇಣಿನಿಂದ ಸಾಯಬೇಕಿತ್ತು. ಆಗ ಆ ಕ್ಷುದ್ರ ಜಂತುವು ಎಷ್ಟು ಉಪಹಾಸ್ಯದಿಂದ ನಗುತ್ತಿದ್ದನೋ ! ಆದುದರಿಂದ ಒಬ್ಬ ಪಾದ್ರಿಯನ್ನು ದೊರಕಿಸಿ-ಅವನಿಗೆ ಸುಳ್ಳು ಹೇಳಿದೆನು. ನಾನು ಸತ್ಯವಾಗಿ ಸುಳ್ಳನ್ನು ಒಪ್ಪಿಕೊಳ್ಳುತ್ತೇನೆ. ಸುಳ್ಳು ಹೇಳಿದೆ, ನಾನು ಬದುಕಿದೆ.

‘ ಈಗೆಲ್ಲವೂ ಮುಗಿಯಿತು. ಕಡೆಗೆ ಅವನ ದವಡೆಯೊಳಗಿಂದಲೇ ನಾನೂ ಪಾರಾಗಲಾರೆ. ಅದರಿಂದ ಅವನ ಅಂಜಿಕೆಯಿದೆಯೆಂದು ಮಾತ್ರ ಭಾವಿಸಬಾರದು ನೀವು. ಅವನನ್ನು ಎಷ್ಟು ತಿರಸ್ಕರಿಸಿದರೂ ಕಡಿಮೆಯೇ. ’

‘ ಈ ಸಂಕಟಗ್ರಸ್ತ ಪ್ರಾಣಿಯನ್ನು ನೋಡಲಾಸಲ್ಲ. ಉಸಿರಾಡಿಸಲು ಬಾರದು. ಉಬ್ಬಸಬಡಿಯುತ್ತಿರುವದರಿಂದ ಶಬ್ದಗಳು ಬಾಯಿಂದ ಹೊರಬೀಳಬೇಕಾದರೆ ಕೃತಾವಸ್ಥೆಯಾಗುತ್ತಿತ್ತು. ಇಂಥ ಅತ್ಯವಸ್ಥೆ

ಯಲ್ಲಿಯೇ ಬಾಯಿಂದ ಅರಿವೆ ಕಚ್ಚುತ್ತ, ಅಕರಾಳ ವಿಕರಾಳ ಬಾಯಿ ತೆರೆಯುತ್ತ, ಕಟಿಗೆಯಾಗಿದ್ದ ಕಾಲುಗಳನ್ನು ಮೆಲ್ಲಗೆ ಅತ್ತಿತ್ತ ಅಲುಗಾಡಿಸುತ್ತ ಒಂದೆಸವನೆ ಸಿಟ್ಟಿನ ಆವೇಶದಿಂದ ಎಲ್ಲವನ್ನೂ ತೋಡಿಕೊಂಡನು.

'ಹಾ! ಎಂಥ ಭೀಕರ ಪ್ರಾಣಿ! ಎಷ್ಟು ನೆನವು! ಎಂಥ ಸೇಡು!

'ಇನ್ನೂ ಏನಾದರೂ ಹೇಳುವದಿದೆಯೇ' ಎಂದು ನಾನು ಭ್ರಮೆಗೊಂಡವರಂತೆ ವಿಚಾರಿಸಿದೆನು.

'ಇಲ್ಲ. ಇಲ್ಲ.'

'ಹಾಗಾದರೆ- ಶಾಂತನಾಗು.'

'ನಮಸ್ಕಾರ ಮಾಡಲು ಕೈ ಎತ್ತಲು ಯತ್ನಿಸಿ-'ಕೆಲವು ದಿನ.... ಬದು........ಕಿ........ಈ........ಗ........ಹೊ........ರ........ಟೆ........'

'ಕಪ್ಪಿಟ್ಟ ಮುಖದ, ವ್ಯಾಕುಲಭಾವದ ಪಾದ್ರಿಯ ಛಾಯೆಯು ಗೋಡೆಯ ಮೇಲೆ ಬಿದ್ದಿತ್ತು. ಅವನ ಕಡೆಗೆ ನಾನು ಹೊರಳಿ 'ನೀವಿಲ್ಲಿರು, ವಿಯಾ' ಎಂದು ಕೇಳಿದೆನು.

'ಇರುತ್ತೇನೆ.'

'ಹೌದು, ಹೌದು, ನನ್ನ ಹೆಣಕ್ಕಾಗಿ ಕಾಗೆಗಳನ್ನು ತರಲಿಕ್ಕೆ ಇರುತ್ತಾನೆ' ಎಂದು ಮೃತ್ಯುಶಯ್ಯೆಯ ಮೇಲಿನ ಮನುಷ್ಯನು ವಿಕಟ ಹಾಸ್ಯದಿಂದ ಗೊಣಗಿದನು.

'ನನಗೆ ಕೇಳಿ ಕೇಳಿ ಸಾಕುಸಾಕಾಗಿತ್ತು. ಬಾಗಿಲವನ್ನು ತೆರೆದು ನಾನು ಹೊರಬಿದ್ದು ಬಿಟ್ಟೆನು.

---

## ತಪ್ಪು ತಿಳಿವಳಿಕೆ

ಪೋಸ್ಟಮನ್ನ ಬೋನಿಫೇಸನು ಪೋಸ್ಟಾಫೀಸನ್ನು ಬಿಟ್ಟು ಹೊರ ಬಂದನು. ಹಂಚುವ ಕಾಗದ ಪತ್ರಗಳು ಅಂದು ಕಡಿಮೆಯಿದ್ದುದರಿಂದ ಪ್ರತಿದಿವಸ ಹತ್ತುವಷ್ಟು ಹೊತ್ತು ಹಿಡಿಯಲಾರದೆಂದು ಹಿಗ್ಗಿದನು. ಅವನ ಕೆಲಸವು ವ್ಹಿರೇವ್ಹಿಲೇ ಪಟ್ಟಣದ ಹತ್ತರಿರುವ ಹಳ್ಳಿಯಲ್ಲಿ. ಪ್ರತಿ ದಿನವೂ ಕೆಲಸವನ್ನು ತೀರಿಸಿಕೊಂಡು ಸಂಜೆಗೆ ಬಂದನೆಂದರೆ ಕಾಲುಗಳು ಬೇರೆಯವರವೋ ಎನ್ನುವಷ್ಟು ದಣಿದು ಬರುತ್ತಿದ್ದನು.

ಹೀಗಾಗಿ ಇಂದು ಹಂಚುವದು ಬೇಗನೆ ಮುಗಿಯುವದು! ಹಾದಿ ಯಲ್ಲಿ ಅತ್ತಿತ್ತ ನಿಂತು, ಮನೆಗೆ ಮೂರು ಗಂಟೆಗೆ ಮರಳಬಹುದೆಂದು ಲೆಕ್ಕ ಹಾಕಿದನು. ಎಂಥ ದೈವ ತನ್ನದು ಇಂದು! ಎಂದು.

ಸೆನೆಮುರೆ ದಾರಿಯಿಂದ ಪಟ್ಟಣವನ್ನು ದಾಟಿ ತನ್ನ ಕೆಲಸವನ್ನು ಆರಂಭಿಸಿದನು. ಜೂನ ತಿಂಗಳು ಕೇಳುವದೇನು—ಭೂಮಾತೆಯು ಹಸಿರು ಬಟ್ಟೆಯನ್ನುಟ್ಟುಕೊಂಡು ಶೋಭಿಸುತ್ತಿದ್ದಳು

ನೀಲೀಬಣ್ಣದ ಚಣ್ಣ, ಅಂಗಿ, ಕೆಂಬಣ್ಣ ಪಟ್ಟೆಗಳಿಂದ ಸುತ್ತಿದ ಕಪ್ಪನ್ನ ಟೊಪ್ಪಿಗೆ ಅವನ ಮೈಮೇಲಿದ್ದವು. ಸಮೀಪದ ಕಾಲುದಾರಿ ಯನ್ನೆ ಹಿಡಿಯಬೇಕೆಂದು ಕೆಲ ಹೊಲಗಳನ್ನು ದಾಟುತ್ತ ಸಾಗಿದನು. ಭುಜದವರೆಗೆ ಬೆಳೆಗಳು ಬೆಳೆದು ನಿಂತಿವೆ. ಸುಳಿಗಾಳಿಯಿಂದ ಮೆಲ್ಲ ಮೆಲ್ಲನೆ ಹೊಯ್ದಾಡುವ ಹಸಿರು ನೀರಿನ ಸಮುದ್ರದ ಮೇಲೆ ತೇಲುತ್ತ ಹೋಗುತ್ತಿರುವಂತೆ ಅವನ ತಲೆಯು ಮಾತ್ರ ಎದ್ದು ಕಾಣಿಸುತ್ತಿತ್ತು.

ಹೊಲಗಳೆಲ್ಲವೂ ಬೇಲಿಯಿಂದ ಬಂಧಿಸಲ್ಪಟ್ಟಿವೆ. ನಡುನಡುವೆ ಸಣ್ಣ ಸಣ್ಣ ಬಾಗಿಲುಗಳು. ಪೋಸ್ಟಮನ್ನನು ಸಣ್ಣ ಬಾಗಿಲಿನಿಂದ ಬಂದು ಹೊಲದೊಳಹೊಕ್ಕನು. ಹೊಲದಲ್ಲಿ ಹೋರೆಮಾಡುತ್ತಿದ್ದ ಮೊನ್‌ಶ್ಯೂರ ನನ್ನು ಕಂಡು 'ನಮಸ್ಕಾರ ರಾಯರೇ' ಎಂದು, ಅವರ 'ಪೆಟಿಟ್ ನಾರ್ಮಂಡ್' ವರ್ತಮಾನಪತ್ರವನ್ನು ಕೊಟ್ಟನು. ಹೊಲಸಾದ ಕೈ ಗಳನ್ನು ಚಣ್ಣಕ್ಕೆ ಒರಿಸಿಕೊಳ್ಳುತ್ತ ಪತ್ರಿಕೆಯನ್ನು ಅವನು ತೆಗೆದು

ಕೊಂಡನು. ಮಧ್ಯಾಹ್ನದ ಊಟವಾದ ಮೇಲೆ ಬಿಡುವು ದೊರೆಯುವದ ರಿಂದ ಆಗ್ಗೆ ಓದಿದರಾಯಿತೆಂದು ಚಣ್ಣದ ಕಿಸೆಯಲ್ಲಿ ಆ ವರ್ತಮಾನಪತ್ರ ವನ್ನು ಹಾಕಿಕೊಂಡು ತನ್ನ ಕೆಲಸಕ್ಕೆ ಹತ್ತಿದನು ಇತ್ತ ಪೋಸ್ಟಮನ್ನನೂ ತನ್ನ ಚೀಲವನ್ನು ಸರಿಮಾಡಿಕೊಂಡು ಕೈಯಲ್ಲಿದ್ದ ಪುಡಿಕೆಯನ್ನು ಹಿಡಿದುಕೊಂಡು ಮುಂದೆ ಪ್ರಯಾಣ ಬೆಳೆಸಿದನು. ಇವನ ವೇಷವನ್ನು ಕಂಡು ನಾಯಿಗಳು ತೆರಪಿಲ್ಲದೆ ಬೊಗುಳತೊಡಗಿದವು. ಕಟ್ಟಿದ್ದ ಕಬ್ಬಿಣದ ಸರಪಳಿಯನ್ನೇ ಹರಿದು ಹಾಕಿ, ಓಡಿ ಬಂದು ಇವನನ್ನು ಎಲ್ಲಿ ಕಚ್ಚುವವೋ ಎಂಬ ರಭಸದಿಂದ ಜಗ್ಗಾಡುತ್ತಿದ್ದವು ಕಟ್ಟಿದ ನಾಯಿಗಳು ಎಷ್ಟು ಬೊಗುಳಿದರೇನು–ತನಗೇನೂ ಅಪಾಯವಿಲ್ಲವೆಂಬ ಧೈರ್ಯದಿಂದ ದೊಡ್ಡ ದೊಡ್ಡ ಹೆಜ್ಜೆಯನ್ನು ಹಾಕುತ್ತ ನಿರ್ಭೀತಿಯಿಂದ ಪೋಸ್ಟಮನ್ನನು ಸಾಗಿದ್ದನು.

ಸೆನೆಮೆರಿಯಲ್ಲಿರುವ ಒಂದು ಗುಡಿಸಲದಲ್ಲಿಯ ಮನುಷ್ಯನ ಕಾಗದ ಪತ್ರಗಳನ್ನು ಕೊಟ್ಟು, ಹೊಲದೊಳಗೆ ಬಿದ್ದ ಅಡ್ಡದಾರಿಯನ್ನು ಹಿಡಿದನು. ಅಲ್ಲಿಂದ ಅರ್ಧ ಮೈಲಿನ ಮೇಲೆ ಇರುವ ಒಂದು ಚಿಕ್ಕ ಮನೆಯಲ್ಲಿ ತೆರಿಗೆ ವಸೂಲು ಮಾಡುವ ಅಧಿಕಾರಿಯಿರುತ್ತಿದ್ದನು. ಅವನ ಟಪಾಲನ್ನು ಮುಟ್ಟಿಸಲು ನೆಟ್ಟಗೆ ಅವನ ಮನೆಯ ಕಡೆಗೆ ಹೊರಟನು.

ಈ ತೆರಿಗೆ ವಸೂಲು ಮಾಡುವ ಅಧಿಕಾರಿಯು–ಮೊನ್‌ಶ್ಯುಅರ್ ಚಪಾಟೀಸನು. ಇಲ್ಲಿಗೆ ವರ್ಗವಾಗಿ ಒಂದೇ ಒಂದು ವಾರವಾಗಿತ್ತು. ಅವನ ಮದುವೆಯಾಗಿ ಬಹಳ ದಿನಗಳಾಗಿರಲಿಲ್ಲ. ಹೆಂಡತಿಯನ್ನು ಕರೆದುಕೊಂಡು ಹೊಸ ಊರಿನಲ್ಲಿ ಹೊಸದಾಗಿ ಸಂಸಾರವನ್ನು ಹೂಡಿದ್ದನು.

'ಪ್ಯಾರಿಸ್ ಪೇಪರ'ನ್ನು ಕೈಯಲ್ಲಿ ತೆಗೆದುಕೊಂಡನು. ಹೊತ್ತು ಸಿಕ್ಕಾಗ ಮಾತ್ರ ಬೋನಿಫೇಸನು ಹೀಗೆ ಯಾವಾಗಾದರೊಮ್ಮೆ ಪತ್ರವನ್ನು ಓದಿಯೇ, ಅದನ್ನು ಅವರಿಗೆ ಮುಟ್ಟಿಸುವ ಪರಿಪಾಠ ಮಾಡಿಕೊಂಡಿದ್ದನು.

ಅದರಂತೆ ಅದರ ಕಟ್ಟನ್ನು ಉಚ್ಚಿ, ಬಿಚ್ಚಿ ಓದುತ್ತೋದುತ್ತ ನಡೆಯಹತ್ತಿದನು. ಮೊದಲಿನ ಪುಟವು ಅವನಿಗೆ ತೀರ ಸೇರುತ್ತಿರಲಿಲ್ಲ.

ರಾಜಕೀಯ ವಿಷಯವು ಅವನಿಗೆ ಆಗುತ್ತಿರಲಿಲ್ಲ. ಆರ್ಥಿಕ ವಿಷಯದ ಸುದ್ದಿಯ ಕಡೆಗೆ ಅವನೆಂದೂ ಕಣ್ಣು ಹಾಕುತ್ತಿರಲಿಲ್ಲ. ಆದರೆ ವಾರ್ತಾ ಸಂಗ್ರಹದ ಪುಟವು ಮಾತ್ರ ಅವನಿಗೆ ಪುಟಗೊಡುತ್ತಿತ್ತು ಒಂದಕ್ಷರ ವನ್ನು ಬಿಡದೆ ತುದಿಯವರೆಗೆ ಓದಿಯೇ ತೀರುತ್ತಿದ್ದನು. ಅವನಿಗೆ ಈ ಸುದ್ದಿಗಳನ್ನೋದುವದರಿಂದ ಅಷ್ಟೊಂದು ಹಿಗ್ಗು.

ಅಂದಂತೂ ಆ ಸುದ್ದಿಗಳು ಹೆಚ್ಚಾಗಿಯೇ ಇದ್ದವು.ಸುದ್ದಿಗಾರರೇನು ಕಡಿಮೆಯೇ ? ನಾನಾ ತರಹದ ಸುದ್ದಿ, ವಿಚಿತ್ರ ಸುದ್ದಿ, ಅದ್ಭುತ ಸುದ್ದಿ ! ಎಲ್ಲವುಗಳೂ ಬರುವವು ಈ ವರ್ತಮಾನಪತ್ರಗಳಲ್ಲಿ.

'ಜಾದೂಗಾರನ ಗುಡಿಸಲದಲ್ಲಿ ಸಂಭವಿಸಿದ ಸುದ್ದಿಯ ವಿವರವು' ಎಂಬ ಸುದ್ದಿಯು ಅವನನ್ನು ಗಾಬರಿಗೊಳಿಸಿತು. ತೀರ ಸಾವಕಾಶವಾಗಿ ಒಂದೊಂದೆ ಅಕ್ಷರವನ್ನು ಓದತೊಡಗಿದನು. ವಿವರಗಳು ದಿಗಿಲುಗೊಳಿಸು ವಂಥವಿದ್ದವು :

'ಒಂದಿನ ಮುಂಜಾನೆ. ಒಬ್ಬ ಕಟ್ಟಿಗೆ ಕಡಿಯುವವನು ಈ ಜಾದೂ ಗಾರನ ಗುಡಿಸಲದ ಮೇಲಿಂದ ಅಡವಿಗೆ ಹೊರಟಿದ್ದನು ಗುಡಿಸಲದ ಮುಂದೆ ಅಲ್ಲಲ್ಲಿ ನೆತ್ತರವು ಬಿದ್ದದ್ದು ಅವನಿಗೆ ಕಾಣಿಸಿತು ಯಾರದೋ ಮೂಗು ಒಡೆದು ರಕ್ತವು ಸೋರಿದಂತೆ ಕಾಣುತ್ತಿತ್ತು 'ಅವನು ನಿನ್ನೆ ರಾತ್ರಿ ಹೆಗ್ಗಣವನ್ನು ಕೊಂದಿರಬೇಕು' ಎಂದು ಅವನು ಕಲ್ಪಿಸಿದನು. ತೀರ ಹತ್ತಿರಕ್ಕೆ ಬಂದು ನೋಡುವಷ್ಟರಲ್ಲಿ ಅರ್ಧ ಬಾಗಿಲವು ಒಳನುಗ್ಗಿದೆ; ಜಜ್ಜಿದ ಕೀಲಿಯು ಚಿಲಕದಲ್ಲಿ ಜೋತಾಡುತ್ತಿತ್ತು.

'ಅವನು ಇದೆಲ್ಲವನ್ನು ನೋಡಿ ಅಂಜಿದನು. ಹೌಹಾರಿದಂತವನಾಗಿ ಪೋಲೀಸಗೌಡನಿಗೆ ಸುದ್ದಿಯನ್ನು ಮುಟ್ಟಿಸಬೇಕೆಂದು ಕಾಲಿಗೆ ಬುದ್ಧೀ ಕೊಟ್ಟನು. ಗೌಡನು ಗಾಬರಿಯಾಗಿ ಇಬ್ಬರು-ಮೂವರು ಓಲೆಕಾರ ರನ್ನೂ, ಶಾಲೆಯ ಮಾಸ್ತರರನ್ನೂ ಕರೆದುಕೊಂಡು ಧಾವಿಸುತ್ತ ಜಾದೂಗಾರನ ಗುಡಿಸಲಕ್ಕೆ ಓಡಿಬಂದನು ಅವರೆಲ್ಲರೂ ಗುಡಿಸಲದಲ್ಲಿ ಹೊಕ್ಕರು. 'ಜಾದೂಗಾರನ ರುಂಡವು ಒತ್ತಟ್ಟಿಗೆ ಬಿದ್ದಿದೆ; ದಡವು ಒಲೆಯ ಸಮೀಪದಲ್ಲಿ. ಅವನ ಹೆಂಡತಿಯ ಕುತ್ತಿಗೆಯನ್ನು ಹಿಚುಕಿ

ಕೊಂದಿದ್ದಾರೆ. ಆರು ವರುಷದ ಮಗುವೊಂದು ಹಾಸಿಗೆಯ ಮಟ್ಟೆಯಲ್ಲಿ ಉಸಿರುಗಟ್ಟಿ ಸಾಯಲೆಂದು ಕಟ್ಟಿ ಒಗೆದಿದ್ದಾರೆ. ' ಎಂಬ ಭಯಾನಕ ದೃಶ್ಯವು ಅವರ ಕಣ್ಣಿಗೆ ಬಿದ್ದಿತು. ಎಲ್ಲವನ್ನೂ ನೋಡಿಕೊಂಡು ಮುಂದಿನ ವ್ಯವಸ್ಥೆಗಾಗಿಯೂ, ಚಾಕಶಿ ನಡೆಯಿಸುವದಕ್ಕೂ ಅವರೆಲ್ಲರೂ ಕೂಡಿ ಹಳ್ಳಿಗೆ ಹೋದರು. "

ಬೋನಿಫೇಸ ಪೋಸ್ಟಮನ್ನನು ಈ ಭಯಂಕರ ಕೊಲೆಯ ಸುದ್ದಿಯನ್ನು ಓದಿ ಕೈಕಾಲುಗಟ್ಟನು; ಹೆದರಿದ್ದರಿಂದ ಮೈತುಂಬ ಅವನಿಗೆ ಬೆವರು ಬಿಟ್ಟಿತು. ' ದೇವಾ ! ಎಂಥೆಂಥ ಕೊಲೆಪಾತಕಿಗಳಿದ್ದಾರೆ "ನಿನ್ನ ಸೃಷ್ಟಿಯಲ್ಲಿ ' ಎಂದು ಗಟ್ಟಿಯಾಗಿ ಚೀರಿಕೊಂಡನು.

ಮೊದಲಿನಂತೆ ಅದರ ಕಟ್ಟಿನಲ್ಲಿ ಆ ಪತ್ರವನ್ನು ಹಾಕಿ ಆ ಎದೆ ಬಿರಿಯುವಂಥ ಸುದ್ದಿಯ ವಿಚಾರಗಳನ್ನೆ ತಲೆತುಂಬ ತುಂಬಿಕೊಂಡು ಅವನು ಮುಂದೆ ಸಾಗತೊಡಗಿದನು.

ಕೆಲಹೊತ್ತಿನಲ್ಲಿ ಎಂ ಚಪಾಟೇಸನ ಮನೆಗೆ ಬಂದು ಮುಟ್ಟಿದನು. ಆ ಮನೆಯ ಚಿಕ್ಕತೋಟದ ಬಾಗಿಲನ್ನು ನೂಕಿ ಮನೆಯ ಹತ್ತಿರಕ್ಕೆ ಬಂದನು ಮನೆ ಅಷ್ಟು ಎತ್ತರವಾದುದಲ್ಲ. ಭದ್ರವಾದುದೂ ಅಲ್ಲ ಆಸುಪಾಸು ಮನೆಗಳೇ ಇರಲಿಲ್ಲ ನೆರೆಹೊರೆಯ ಮನೆಗಳೆಂದರೆ ಕೂಗಳತೆಯ ಹೊರಗೇ. ಇದೊಂದೇ ಒಂಟಿ ಮನೆ; ಕಡೆಯ ಮನೆ.

ಎರಡು ಪಾವಟಿಗೆಗಳನ್ನೇರಿದನು; ಬಾಗಿಲ ದೂಡಹತ್ತಿದನು. ಕೀಲಿ ಹಾಕಿದೆಯೆಂದು ಕಂಡು ಬಂದಿತು. ಕಿಡಿಕಿಯ ಪಡಕುಗಳು ತೆರೆದಿದ್ದಿಲ್ಲ; ಆದುದರಿಂದ ಯಾರೂ ಎದ್ದಿರಲಿಲ್ಲೆಂದು ಅವನು ಭಾವಿಸಿಕೊಂಡನು.

ಎಂ. ಚಪಾಟೇಸನು ಇಲ್ಲಿ ಬಂದ ದಿನದಿಂದ ಬಲು ಬೇಗನೆ ಏಳುತ್ತಿದ್ದನಾದ್ದರಿಂದ ಪೋಸ್ಟಮನ್ನನಿಗೆ ಹೆದರಿಕೆ ಹುಟ್ಟಿದಂತಾಯಿತು. ಆದೇ ಆಗ ಏಳು ಬಡಿದು ೧೦ ನಿಮಿಷಗಳಾಗಿದ್ದವು. ಪ್ರತಿದಿನವೂ ವಾಡಿಕೆಯಾಗಿ ಬರುವ ವೇಳೆಗಿಂತ ಒಂದು ತಾಸು ಮೊದಲು ಬಂದಿದ್ದನು. ಆದರೇನಾಯಿತು ? ಇಷ್ಟೊತ್ತಿಗೆ ತೆರಿಗೆಯನ್ನು ವಸೂಲಿಸುವ ಅಧಿಕಾರಿಯು ಏಳಲೇಬೇಕಿತ್ತೆಂದು ಅಂದುಕೊಂಡನು.

ಅತ್ತಿತ್ತ ಹುಳುಹುಳು ನೋಡುತ್ತ ಮನೆಯನ್ನು ಸುತ್ತೂಕಡೆಗೆ ನೋಡಲೆಳಸಿದನು. ತಾನೊಂದು ಸಂಕಟದಲ್ಲಿ ಸಿಕ್ಕಿರುವನೆಂದು ಬೆಚ್ಚಿ ಹೋಗಿದ್ದನು. ಗಿಡದ ಸಮೀಪದಲ್ಲಿರುವ ಒಂದು ಮಡಿಯಲ್ಲಿ ಕೆಲವು ಹೆಜ್ಜೆಗಳು ಅವನ ಕಣ್ಣಿಗೆ ಬಿದ್ದವು. ಅದರ ಹೊರತು ಇನ್ನಾವ ಸಂಶಯವು ಅವನಿಗೆ ಬರಲಿಲ್ಲ.

ಆದರೆ, ಒಮ್ಮೆಲೆ ನಿಶ್ಚೇಷ್ಟಿತನಾಗಿ ನಿಂತನು. ಹೆದರಿಕೆಯಿಂದ ಕೈಕಾಲುಗೆಟ್ಟಿದ್ದನು. ಕಿಡಿಕಿಯ ಹತ್ತಿರ ನಿಂತೇ ನಿಂತನು. ಒಳಗಿನಿಂದ ನರಳುವ ಸಪ್ಪಳವು ಅವನಿಗೆ ಕೇಳಬಂದಿತು.

ಕಿಡಿಕಿಗೆ ಕಿವಿಗಳನ್ನು ಹಚ್ಚಿ ಗೋಡೆಗೆ ಆತುಕೊಂಡು ಬಹು ಎಚ್ಚರದಿಂದ ಕೇಳಲು ನಿಂತನು. ಅದಾರೋ ನರಳುತ್ತಿರುವರೆಂದು ನಿಶ್ಚಯಿಸಿದನು ನರಳುವ ಸಪ್ಪಳವು ಹೆಚ್ಚು ಸ್ಪಷ್ಟವಾಗಿ, ನಿಟ್ಟುಸಿರು ಬಿಟ್ಟಂತೆ, ಗುದ್ದಾಟದಲ್ಲಿ ಕೆಳಗೆ ಸಿಕ್ಕುಬಿದ್ದು ಉಸಿರು ಬಿಡುವಂತೆ ಕೇಳಿಸಹತ್ತಿತು. ಸಪ್ಪಳವು ಹೆಚ್ಚು ಹೆಚ್ಚಾಗಿ, ಕಡೆಗೆ ಅಳುವದರಲ್ಲಿ ಪರಿಣಮಿಸಿತು. ದೊಡ್ಡ ದನಿಯ ಅಳುವು ಕೇಳಿಸಹತ್ತಿತು.

ಒಳಗೆ ಏನಾದರೂ ದುರ್ಘಟ ಪ್ರಸಂಗವು ಸಂಭವಿಸಿರಬಹುದೆಂಬ ಸಂಶಯದಿಂದ ಬೋನಿಫೇಸನು ಅಲ್ಲಿ ನಿಲ್ಲದೆ ಕಾಲಿಗೆ ಬುದ್ಧಿಕೊಟ್ಟನು. ಆ ಮನೆಯ ತೋಟವನ್ನು ಒಂದೆರಡು ಹಾರಿಕೆಯಲ್ಲಿ ದಾಟಿ, ಹುಲ್ಲು ಗದ್ದೆ, ಹೊಲಗಳ ಪರಿವೆಯಿಲ್ಲದೆ ಓಡಲಾರಂಭಿಸಿದನು. ತೊಗಲಿನ ಟಪಾಲು ಚೀಲವು ಒಂದೇ ಸವನೆ ತೊಡೆಗಳಿಗೆ ತಾಕುತ್ತಿತ್ತು. ಅದರ ಲಕ್ಷ್ಯವಿಲ್ಲದೆ ಓಡುತ್ತೋಡುತ್ತ ಪೋಲೀಸರ ಠಾಣೆಗೆ ಬಂದು ಬಿದ್ದನು. ಮಾತಾಡಲು ಬರದಷ್ಟು ತೇಕು ಹತ್ತಿತ್ತು.

ಬ್ರಿಗ್ಯಾಡೀರ್ ಮೆಲಾಟೋರನು ಉಳಿ–ಕೊಡತಿಗಳಿಂದ ಮುರಿದ ಕುರ್ಚಿಯನ್ನು ನೆಟ್ಟಗೆ ಮಾಡುತ್ತಿದ್ದನು. ಜೆಂಡಾರ್ಮೆ ಕಾಟನು ಕುರ್ಚಿಯ ಮುರಿದ ಭಾಗವನ್ನು ತೊಡೆಯಸಂದಿಯಲ್ಲಿ ಗಟ್ಟಿಯಾಗಿ ಹಿಡಿದು ಸೀಳಿದ ಭಾಗವನ್ನು ಕೂಡಿಸುತ್ತಿದ್ದನು. ಬ್ರಿಗ್ಯಾಡೀರನು ಮೀಸೆ ಯನ್ನು ಕಚ್ಚುತ್ತ, ಕೆಲಸದಲ್ಲಿ ಮಗ್ನನಾಗಿ ಒಂದೇ ಸ್ಥಳದಲ್ಲಿ ನೋಡು ತ್ತಿದ್ದರಿಂದ ಅವನ ಕಣ್ಣಲ್ಲಿ ನೀರು ಬಂದಿದ್ದವು. ಅವುಗಳನ್ನು ಒರಬರಸುತ್ತ

ಮಳೆಯನ್ನು ಬಡಿಯುತ್ತಿದ್ದನು. ಅದರ ಹೊಡೆತವು ತಪ್ಪಿ ಅವನ ಕೈಕೆಳಗಿನವನ ಮೈಮೇಲೆ ಬಿದ್ದಿತು.

'ಬೇಗನೆ ಬರ್ರಿ. ಯಾರೋ ಆ ತೆರಿಗೆಯ ವಸೂಲು ಮಾಡುವ ಅಧಿಕಾರಿಯನ್ನು ಕೊಲೆಮಾಡುತ್ತಿದ್ದಾರೆ. ತಡವಾದರೆ ಅನರ್ಥವಾಗುತ್ತದೆ. ಬರ್ರಿ, ಬರ್ರಿ' ಎಂದು ಗಂಟಲ ಹರಿಯುವಂತೆ ಇವರನ್ನು ದೂರದಿಂದ ಕಂಡೊಡನೆ ಬೋನಿಫೇಸನು ಚೀರಿಕೊಂಡನು.

ಇಬ್ಬರೂ ಕೆಲಸವನ್ನು ಅಷ್ಟಕ್ಕೇ ನಿಲ್ಲಿಸಿದರು; ಆಶ್ಚರ್ಯಚಕಿತರಾಗಿ ಗೋಣುಮೇಲೆತ್ತಿದರು.

'ಬೇಗ! ಬೇಗ! ಮನೆಯಲ್ಲಿ ತುಡುಗರು ಸೇರಿದ್ದಾರೆ. ಕೂಗಾಟ ನಡೆದಿದೆ, ಕೇಳಿದ್ದೇನೆ. ಹೊತ್ತುಗಳೆಯಬಾರದು' ಎಂದು ಗಡಿಬಿಡಿಯಿಂದ ಕೂಗಿಕೊಂಡರೂ ಅವರು ಸುಮ್ಮನಿದ್ದುದನ್ನು ಕಂಡು ಮತ್ತೆ ಮಾತನಾಡಿದನು.

'ಅದು ನಿನಗೆ ಹೇಗೆ ತಿಳಿಯಿತು' ಎಂದು ಬ್ರಿಗ್ಯಾಡೀರನು ಕೊಡತಿಯನ್ನು ಕೆಳಗಿಡುತ್ತ ವಿಚಾರಿಸಿದನು.

'ಒಂದು ವರ್ತಮಾನಪತ್ರ, ಎರಡು ಪತ್ರಗಳಿದ್ದವು. ಅವುಗಳನ್ನು ಕೊಡಬೇಕೆಂದು ನಾನು ಅಲ್ಲಿಗೆ ಹೋಗಿದ್ದೆನು. ಬಾಗಿಲಿಗೆ ಬೀಗ ಹಾಕಿತ್ತು. ಅಧಿಕಾರಿಯು ಹೊರಗೆ ಎಲ್ಲಿಯೂ ಕಾಣಲಿಲ್ಲ ಮನೆ ಸುತ್ತಲೆಲ್ಲ ಶೋಧಿಸಿದೆನು; ಒಳಗಿನಿಂದ ನರಳುವ ಸಪ್ಪಳವು ಕೇಳಬಂದಿತು ಕುತ್ತಿಗೆ ಹಿಚುಕುವ ಮುಂದೆ ಹೊರಡುವ ಶಬ್ದದಂತೆ ಆ ಸದ್ದು ಕೇಳಿಸಿತು. ಹಾಗೆನಿಸಿತೆಂದೇ ನಾನು ನಿಮ್ಮ ಕಡೆಗೆ ಈ ಅವಸ್ಥೆಯಲ್ಲಿ ಬಂದಿದ್ದೇನೆ. ಏಳಿರಿ ಅಲ್ಲಿಗೆ ಹೋಗೋಣ' ಎಂದು ಪೋಸ್ಟಮನ್ನನು ಹೇಳಿದನು.

'ಅಲ್ಲಿಂದಲ್ಲೆ ನೀನೇಕೆ ಆ ಅಧಿಕಾರಿಗೆ ನೆರವಾಗಲಿಲ್ಲ?'

'ಆ ತುಡಗುರೆಷ್ಟು ಜನರಿದ್ದರೋ ಏನೋ ಯಾರಿಗೆ ಗೊತ್ತು. ನನ್ನೊಬ್ಬನ ಸಹಾಯವು ನಿರುಪಯೋಗವೆಂದು ಹೆದರಿದೆನು' ಎಂದು ಅವನು ಉತ್ತರವನ್ನು ಕೊಟ್ಟನು.

'ಸ್ವಲ್ಪ ತಡೆ. ಪೋಷಾಕು ಧರಿಸಿಕೊಂಡು ಬರುವೆ'ನೆನ್ನುತ್ತ ಬ್ರಿಗ್ಯಾಡೀರನು ಮನೆಯೊಳಗೆ ಪ್ರವೇಶಿಸಿದನು

ಇನ್ನೊಬ್ಬನು ಕುರ್ಚಿಯನ್ನು ಹೊತ್ತುಕೊಂಡು ಮನೆಯೊಳಗೆ ಒಯ್ದಿಟ್ಟನು. ಮೂವರೂ ಕೂಡಿಕೊಂಡು ಆ ಸ್ಥಳದ ಕಡೆಗೆ ಲಗುಬಗೆಯಿಂದ ಸಾಗಿದರು.

ಆ ಮನೆಯ ಹತ್ತಿರ ಬಂದೊಡನೆ ಮೆಲ್ಲಗೆ ಹೆಜ್ಜೆ ಹಾಕಹತ್ತಿದರು. ಅತ್ತಿತ್ತ ಸುತ್ತೂ ಕಡೆಗೆ ಎಚ್ಚರದಿಂದ ನೋಡುತ್ತ, ಬ್ರಿಗ್ಯಾಡೀರನು ರಿವ್ಹಾಲ್ವರನ್ನು ಹೊರತೆಗೆದನು. ಒಬ್ಬರ ಹಿಂದೊಬ್ಬರು ಜಪ್ಪಿಸಿಕೊಂಡು ತೋಟದೊಳಹೊಕ್ಕು ಮನೆಯ ಗೋಡೆಯ ಹತ್ತಿರಕ್ಕೆ ಮೆಲ್ಲನೆ ಬಂದರು. ಅಪರಾಧಿಗಳು ಪಾರಾಗಿ ಹೋಗಿರಬಹುದೆಂಬ ಸಂಶಯಕ್ಕೆ ಆಸ್ಪದವೇ ಸಿಗದಾಯಿತು. ಯಾಕಂದರೆ ಬಾಗಿಲ ಬೀಗ ಹಾಕಿದಂತಿತ್ತು; ಕಿಡಿಕಿಗಳೂ ತೆರೆದಿರಲಿಲ್ಲ.

'ಸ್ವಲ್ಪ ಹೊತ್ತು ನೋಡೋಣ' ಎಂದನು ಬ್ರಿಗ್ಯಾಡೀರನು. ಹೊತ್ತುಗಳೆಯುವದು ಬೇಡವೆಂದು ಬೋನಿಫೇಸನು ಅವರಿಬ್ಬರನ್ನು ಕೂಡಿಕೊಂಡು ಪ್ರದಕ್ಷಿಣೆ ಹಾಕಿ–'ಸಪ್ಪಳವು ಇಲ್ಲಿಯೇ ಕೇಳಬರುತ್ತಿತ್ತು' ಎಂದು ಹೇಳಿ ಅಲ್ಲಿಯೇ ನಿಂತುಬಿಟ್ಟನು.

ಬ್ರಿಗ್ಯಾಡೀರನೊಬ್ಬನೇ ಮುಂದೊರೆದು ಕಿಡಿಕಿಯ ಪಡುಕುಗಳಿಗೆ ಕಿವಿ ಹಚ್ಚಿ ನಿಂತನು. ಉಳಿದಿಬ್ಬರು ಅವನನ್ನೇ ನೋಡುತ್ತ, ಅವನು ಏನು ಹೇಳಿದರೂ ಕೂಡಲೇ ಮಾಡುವ ಸಿದ್ಧತೆಯಿಂದ ದಾರಿಕಾಯುತ್ತ ನಿಂತರು

ಅವನು ಬಹಳ ಹೊತ್ತಿನವರೆಗೆ ಏಕಾಗ್ರಚಿತ್ತದಿಂದ ಸಪ್ಪಳವನ್ನು ಕೇಳಲು ನಿಂತನು. ಮೂರೇಣಿನ ಟೊಪ್ಪಿಗೆಯನ್ನು ತೆಗೆದು ಬಲಗೈಯಲ್ಲಿ ಹಿಡಿದುಕೊಂಡು ತುದಿಗಾಲ ಮೇಲೆ ನಿಂತು ಬಹು ಲಕ್ಷಪೂರ್ವಕವಾಗಿ ಕೇಳತೊಡಗಿದನು.

ಅವನಿಗೇನು ಕೇಳಿಸಿತು? ಅವನ ಮುಖಲಕ್ಷಣಗಳ ಮೇಲಿಂದಂತೂ ಏನೂ ಕೇಳಿಸಿದಂತೆ ಕಂಡುಬರಲಿಲ್ಲ. ಆದರೆ ಒಮ್ಮಿಂದೊಮ್ಮೆ ಅವನು

ಮುಖವನ್ನು ತಿರುಗಿಸಿದನು ಮಂದಹಾಸ್ಯದಿಂದ ನಕ್ಕಾಗ ಗಲ್ಲದ ಮೇಲೆ ಮೂಡುವಂಥ ಸುಳಿಗಳು ಅವನ ಮುಖದಲ್ಲಿ ತಲೆದೋರಿದವು. ನೆಟ್ಟನೋಟದಿಂದ ಇವನನ್ನೇ ನೋಡುತ್ತಿದ್ದ ಅವರಿಬ್ಬರ ಕಡೆಗೆ ಅವನು ಒಂದೊಂದೆ ಹೆಜ್ಜೆಯನ್ನಿಡುತ್ತ ಬಂದನು.

ಅವನು ತುದಿಗಾಲಿನಿಂದ ನಡೆಯುತ್ತ ಅವರಿಬ್ಬರಿಗೆ ತನ್ನನ್ನು ಹಿಂಬಾಲಿಸಿ ಬರಬೇಕೆಂದು ಸನ್ನೆಮಾಡಿದನು ತೋಟದ ಹೊರಬಾಗಿ ಲಲ್ಲಿ ನಿಂತು ಅವನ ಕಾಗದಪತ್ರಗಳನ್ನು ಬಾಗಿಲಿನೊಳಗೆ ಚೆಲ್ಲಲು ಬೋನಿ ಫೇಸನಿಗೆ ಉಪದೇಶ ಮಾಡಿದನು.

ಗಾಬರಿಗೊಂಡ ಪ್ರೋಸ್ಪಮನ್ನನು ವಿಧೇಯನಾಗಿ ಅವನು ಹೇಳಿ ದಂತೆ ಮಾಡಿದನು.

'ಹೊರಡೋಣ, ನಡೆಯಿರಿನ್ನು ತಿರುಗಿ' ಎಂದು ಬ್ರಿಗ್ಯಾಡೀರನು ಅಧಿಕಾರವಾಣಿಯಿಂದ ಹೇಳಿದನು.

ಸ್ವಲ್ಪ ದೂರ ಬಂದ ಮೇಲೆ ಬ್ರಿಗ್ಯಾಡೀರನು ನಗಿಸುವ ಮುಖ ಭಾವದಿಂದ ಪ್ರೋಸ್ಪಮನ್ನನನ್ನು ನೋಡಿದನು. ದೊಡ್ಡ ಕಣ್ಣುಗಳನ್ನು ಮಾಡಿ ನಗೆಚೇಷ್ಟೆಯಿಂದ ಮುಖವನ್ನು ಅರಳಿಸಿ, ಅಣಕಿಸುವ ದನಿಯಲ್ಲಿ 'ನೀನು ಮೂರ್ಖನಿರುವಿ, ಮೂರ್ಖ' ಎಂದು ಬ್ರಿಗ್ಯಾಡೀರನಂದನು.

'ಯಾಕೆ, ನನಗೆ ಸಪ್ಪಳ ಕೇಳಿಸಿದೆ. ಬೇಕಾದರೆ ಆಣೆ ಮಾಡಿ ಹೇಳುತ್ತೇನೆ' ಎಂದು ಸ್ವಲ್ಪ ಗಡಸುದನಿಯಿಂದ ಬೋನಿಫೇಸನು ಮರುಮಾತನಾಡಿದನು.

ಬ್ರಿಗ್ಯಾಡೀರನು ನಗೆಯನ್ನು ಹೆಚ್ಚು ಹೊತ್ತು ತಡೆಹಿಡಿಯದೆ ಗಟ್ಟಿಯಾಗಿ ನಗತೊಡಗಿದನು. ಎರಡೂ ಕೈಗಳಿಂದ ಪಕ್ಕಡಿಗಳನ್ನು ಹಿಡಿದುಕೊಂಡು ಬಿದ್ದು ಬಿದ್ದು ನಗಹತ್ತಿದನು. ನಕ್ಕು ನಕ್ಕು ಅವನ ಹೊಟ್ಟೆ ಕುಟ್ಟು ಹಿಡಿಯಿತು. ಚಪ್ಪಾಳೆಯನ್ನಿಕ್ಕುತ್ತ ಕೇಕೆ ಹೊಡೆ ಹೊಡೆದು ನಕ್ಕನು. ಕಣ್ಣು ನೀರಿನಿಂದ ತುಂಬಿದವು. ಅವನ ಈ ಹುಚ್ಚು ನಗೆಯನ್ನು ಕಂಡು ಅವನಿಗೆ ಹರುಷವಾಯು ಆಯಿತು ಎಂದು ದಿಗಿಲು ಗೊಂಡರು ಉಳಿದಿಬ್ಬರು. ಅವನನ್ನು ನೋಡಲು ಸಹ ಹೆದರಿದರು.

ಅವನು ಮಾತಾಡಲಿಲ್ಲ, ನಗುವದನ್ನೂ ಬಿಡಲಿಲ್ಲ; ನಗುವ ಕಾರಣವನ್ನೂ ತಿಳಿಸಲಿಲ್ಲ. ಒಂದು ಸನ್ನೆ ಮಾಡಿದನು. ಎಲ್ಲರಿಗೂ ಗೊತ್ತಿದ್ದ ಸನ್ನೆಯೇ; ಅರ್ಥವಾಗಲು ಕಠಿಣವಾದುದಲ್ಲ. ತೀರ ರೂಢಿಯೊಳಗಿನದು. ಆದರೆ ಅದು ಇವರಿಬ್ಬರಿಗೆ ತಿಳಿಯದೆ ಹೋಯಿತು; ಅವನು ಮಾತ್ರ ತಿರುಗೂ-ಮುರುಗೂ ನಗುತ್ತಲೇ ಸನ್ನೆ ಮಾಡುವದನ್ನು ಬಿಡಲಿಲ್ಲ.

ಕಡೆಗೆ ಅವನ ಕೈಕೆಳಗಿನವನಿಗೆ ಒನ್ಮ್ಮೆಲೆ ಅರ್ಥವು ಹೊಳೆಯಿತು; ಅವನೂ ನಗಲಿಕ್ಕೇ ಹತ್ತಿದನು. ಈ ಇಬ್ಬರ ನಗೆಯು ಕಾರಣವು ಬೋನಿಫೇಸನಿಗೆ ಏನೂ ಹೊಳೆಯಲಿಲ್ಲ; ಆದರೆ ಅವರ ನಗೆಯು ಮೇರೆ ತಪ್ಪಿತು.

'ಎಂಥ ಚಮತ್ಕಾರ! ನಗೆಚೇಷ್ಟೆ! ಎಷ್ಟು ಮೋಜು! ಈ ಅಪರಾಧದ ಜನಕನು ಬೋನಿಫೇಸನೆಂದು ಬರೆದಿಟ್ಟುಕೊಳ್ಳುವೆನು' ಎಂದು ಕಡೆಗೊಮ್ಮೆ ಬ್ರಿಗ್ಯಾಡೀರನು ಶಾಂತನಾಗಿ, ಪೋಸ್ಟಮನ್ನನ ಬೆನ್ನು ಚಪ್ಪರಿಸಿ ಕೂಗಿಕೊಂಡನು.

'ಅದೇಕೆ, ನಾನು ಕೇಳಿದ್ದೇನೆ. ನನ್ನಾಣೆ' ಎಂದು ಪೋಸ್ಟಮನ್ನನು ಬಿರಿಬಿರಿ ಕಣ್ಣುಬಿಡುತ್ತ ಮತ್ತೂ ಅದೇ ಮಾತನ್ನೆ ಮುಂದುವರಿಸಿದನು.

ಮತ್ತೆ ಬ್ರಿಗ್ಯಾಡೀರನ ನಗೆಯಾರಂಭವಾಯಿತು. ಅವನ ಕೈಕೆಳಗಿನವನು ಅಲ್ಲಿಯೇ ಹುಲ್ಲು ಮೇಲೆ ಕೂತು ಮನದಣಿಯೆ ನಗತೊಡಗಿದನು.

'ಏನು! ಸಪ್ಪಳವನ್ನು ಕೇಳಿದೆಯಾ, ಆ ರೀತಿಯಲ್ಲಿ ನೀನೂ ನಿನ್ನ ಹೆಂಡತಿಯ ಜೀವ ತೆಗೆದುಕೊಳ್ಳುವಿಯಾ,-ಎಂಥ ಮೂರ್ಖ ಶಿರೋಮಣಿಯೋ ನೀನು? ಇಷ್ಟು ತಿಳಿಯಬಾರದೆ?'

'ನನ್ನ ಹೆಂಡತಿಯನ್ನೇ?'

ಬಹಳ ಹೊತ್ತಿನ ವರೆಗೆ ಏನನ್ನೋ ನೆನಪುಮಾಡಿಕೊಳ್ಳುವವರಂತೆ ಪೋಸ್ಟಮನ್ನನು ನಿಂತನು; ಮತ್ತು ಮಾತನ್ನು ಮುಂದುವರಿಸಿದನು :-

'ನನ್ನ ಹೆಂಡತಿ ಹೌದು, ನಾನು ಬಡಿದರೆ ಅವಳು ಬೊಬ್ಬೆಯಿಡುತ್ತಾಳೆ-ಬೊಬ್ಬೆಗಳು ಬೊಬ್ಬೆಯಲ್ಲವೇ? ಎಂ. ಚಪಾಟೀಸನೂ ತನ್ನ

ಹೆಂಡತಿಯನ್ನು ಬಡಿಯುತ್ತಿರಬಹುದೆ ? ಹಾಗಾದರೆ ಅಳುವ ಸಪ್ಪಳವು ಕೇಳಿಸಬೇಕು. ಅದು ಬಿಟ್ಟು ಬೇರೆ ಸಪ್ಪಳವಿರುವದು ಮಾತ್ರ ನಿಜ.'

ಆ ಮೇಲೆ ಬ್ರಿಗ್ಯಾಡೀರನು ಹಾಸ್ಯೋನ್ಮಾದದಲ್ಲಿ ಅವನ ಹೆಗಲನ್ನು ಹಿಡಿದು ತನ್ನ ಕಡೆಗೆ ಅವನ ಮುಖವನ್ನು ಮಾಡಿಕೊಂಡನು. ಏನನ್ನೋ ಕಿವಿಯಲ್ಲಿ ಹೇಳಿದ್ದರಿಂದ ಕಾರಣವು ಅವನಿಗೆ ಗೊತ್ತಾಯಿತು. ಆಶ್ಚರ್ಯ ಭಾವವನ್ನು ವ್ಯಕ್ತಮಾಡಿದನು.

'ಇಲ್ಲ. ಅದು–ಅಲ್ಲ–ಅದಲ್ಲ–ಅವಳೇನೂ ಅನ್ನಲಿಲ್ಲ–ಹಾಗೆಂದಾದರೂ ನಂಬಲು ಸಾಧ್ಯವೇ ? ಕೊಲೆಯಾಗಿರಬೇಕೆಂದು .... ಆಣೆ .... ಮಾಡಿ ಹೇಳಿದ್ದೇನೆ ....' ಎಂದು ಚಿಂತಾಕ್ರಾಂತನಾಗಿ ಬೋನಿಫೇಸನು ಗೊಣಗುಟ್ಟಿದನು.

ತನ್ನ ಶೋಧವು ನಿರರ್ಥಕವಾಯಿತೆಂದು ವಿಷಾದಪಟ್ಟುಕೊಂಡನು. ಅಪಮಾನಗೇಡಿಯಾದನೆಂಬ ಭಾವವು ಅವನ ಮುಖದ ಮೇಲೆ ಒಡೆದು ಕಾಣುತ್ತಿತ್ತು. ಹೊಲಗಳೊಳಗಿಂದ ಹಾಯ್ದು ತನ್ನ ಮನೆಯ ದಾರಿಯನ್ನು ಹಿಡಿದು ಪೋಸ್ಟಮನ್ನನು ಸಾಗಿದನು. ಇತ್ತ ಪೋಲೀಸರಿಬ್ಬರೂ ನೆನೆನೆನಿಸಿಕೊಂಡು ನಗುತ್ತ, ಅವನು ಕಣ್ಮರೆಯಾಗುವವರೆಗೆ ಅವನನ್ನು ಕೂಗುತ್ತ, ಒಂದೊಂದೆ ಹೆಜ್ಜೆಯನ್ನಿಡುತ್ತ ಮನೆಯ ದಾರಿಯನ್ನು ಹಿಡಿದು ಸಾಗಿದರು.



# ದಳವಾಯಿಯ ದೂತನು

ಸುಡುಗಾಡಗಟ್ಟೆಯು ಅಧಿಕಾರಿ ಜನರಿಂದ ತುಂಬಿ ಹೂದೋಟದಂತೆ ಕಾಣುತ್ತಿತ್ತು. ಕೆಂಪುಬಣ್ಣದ ಟೊಪ್ಪಿಗೆಗಳು, ಚಣ್ಣಗಳು, ಹೊಂಬಣ್ಣದ ಪಟ್ಟಿಗಳು, ಲಕಲಕಿಸುವ ಬಿರಡಿಗಳು, ಹೊಳೆಯುವ ಕತ್ತಿಗಳು, ದೊಡ್ಡ ದೊಡ್ಡ ಅಧಿಕಾರಿಗಳ ಭುಜಗಳಿಗೆ ತೊಡರುಹಾಕಿದ ಗಂಟುಗಳು, ದಂಡನಾಯಕರ ಹೊಂಬಣ್ಣದ ಗೋಟುಗಳು—ಇವೇ ಮೊದಲಾದವುಗಳು ಗೋರಿಗಳ ನಡುವೆ ಸುಳಿದಾಡುತ್ತಿದ್ದವು. ದುಃಖಸೂಚಕವಾದ ಕಪ್ಪನ್ನ ಚಿನ್ಹವು ಕಬ್ಬಿಣದಂಥ ತೋಳುಗಳ ಮೇಲೆ ಎದ್ದು ಕಾಣುತ್ತಿದೆ; ಅಳಿದು ಹೋದವರ ಗೋರೆಗಳ ಮೇಲೆ ಕಟ್ಟಿಗೆಯು, ಸಂಗಮುರವರೀ ಕಲ್ಲಿನ ಸಿಲುಬೆ ಚಿನ್ಹಗಳು ನಿಲ್ಲಿಸಲ್ಪಟ್ಟಿವೆ

ಎರಡು ದಿನಗಳ ಹಿಂದೆ ಜಳಕ ಮಾಡುವಾಗ ಮುಳುಗಿ ಹೋದ ದಳವಾಯಿ ಲಿಮಾಯಿಸನ ಹೆಂಡತಿಯನ್ನು ಅವರು ಹುಗಿಯುತ್ತಿದ್ದರು.

ಎಲ್ಲವೂ ಮುಗಿಯಿತು. ಪಾದ್ರಿಯೂ ತೆರಳಿದನು. ಅಲ್ಲಿ ಉಳಿದವರೆಂದರೆ ದಳವಾಯಿ ಲಿಮಾಯಿಸನು, ಇಬ್ಬರು ಅಧಿಕಾರಿಗಳು ಗೋರಿಯ ಎದುರಿನಲ್ಲಿ ನಿಂತುಕೊಂಡು, ದಳವಾಯಿಯು ತನ್ನ ಎಳೆವಯಸ್ಸಿನ ಮಡದಿಯನ್ನು ಹೊತ್ತುಕೊಂಡುಬಂದ ಶವದ ಪೆಟ್ಟಿಗೆಯನ್ನು ದಿಟ್ಟಿಸಿ ನೋಡುತ್ತ ನಿಂತಿದ್ದಾನೆ.

ತೆಳ್ಳಗಿನ ಮೈಕಟ್ಟು, ಎತ್ತರವಾದ ದೇಹ. ಬಿಳಿಮೀಸೆ, ಉದ್ದವಾದ ಗಡ್ಡಗಳು; ಇಳಿವಯಸ್ಸು, ಸೇನಾಪತಿ ಸೊರ್ಟಿಸನು ತೀರಿಕೊಂಡನು. ಅವನಿಗೆ ಒಬ್ಬಳೇ ಒಬ್ಬ ಮಗಳು; ಅನಾಥೆ ಬಲುದಿನಗಳಿಂದ ದಳವಾಯಿ ಲಿಮಾಯಿಸನೂ ಸೇನಾಪತಿಯೂ ಸ್ನೇಹಿತರು. ಮೂರು ವರುಷಗಳ ಹಿಂದೆಯೇ ಈ ಅನಾಥ ಬಾಲಿಕೆಯನ್ನು—ತನ್ನ ಸ್ನೇಹಿತನ ಮಗಳನ್ನು—ಅವನು ಮದುವೆಯಾಗಿದ್ದನು.

ಆ ಅಧಿಕಾರಿಗಳಿಬ್ಬರು ದಳವಾಯಿಯ ಬಗಲಲ್ಲಿ ಕೈಹಾಕಿ ಒಂದೊಂದೆ ಹೆಜ್ಜೆಹಾಕುತ್ತ ಮನೆಯ ದಾರಿಯನ್ನು ಹಿಡಿದರು. ಅವರಿಂದ

ಕೊಸರಿಕೊಂಡು ನೀರುದುಂಬಿದ ಕಣ್ಣುಗಳಿಂದ ' ಇಲ್ಲ, ಇಲ್ಲ, ಸ್ವಲ್ಪ ತಾಳಿ'ರೆಂದು ಬಾಯಿಯಲ್ಲಿಯೆ ಗೊಣಗುತ್ತ ಗೋರಿಯ ಹತ್ತಿರ ಅವನು ಓಡಿದನು. ಜಗತ್ತಿನಲ್ಲಿ ಈ ವರೆಗೆ ತನಗುಳಿದದ್ದೆಂದರೆ ಆ ಪ್ರೇಮ. ಆ ಜೀವನ. ಇವೆರಡನ್ನು ಬಿಟ್ಟರೆ ಅವನಿಗೆ ಬೇರೆ ಗತಿಯೇ ಇರಲಿಲ್ಲ. ಅದನ್ನೇ ನುಂಗಿ ನೀರು ಕುಡಿದ ಆ ಗೋರಿಯನ್ನು ನೋಡಿ ಅವನ ದುಃಖವು ಮಿತಿಮೀರಿತು. ದೊಡ್ಡ ದನಿ ತೆಗೆದು ಅಳಲಾರಂಭಿಸಿದನು.

ಒಮ್ಮೆಲೆ ನಾಯಕ ಆರ್‌ವೊಂಟನು ಅವನಿದ್ದಲ್ಲಿ ಹೋದನು. ' ಬಾ, ನನ್ನ ಗೆಳೆಯಾ, ಬಾ. ಅಲ್ಲಿ ನೀನು ನಿಲ್ಲಬಾರದು ' ಎಂದೆನ್ನುತ್ತ ಅವನನ್ನು ಒತ್ತಾಯಪಡಿಸಿ, ಎಳೆದುಕೊಂಡು ಬಂದನು. ದಳವಾಯಿಯು ನಿರುಪಾಯನಾಗಿ ಮನೆಗೆ ಬಂದನು.

ಅವನು ತನ್ನ ಕೋಣೆಯ ಬಾಗಿಲವನ್ನು ತೆರೆದನು; ಮೇಜಿನ ಮೇಲೆ ಬಿದ್ದಿರುವ ಪತ್ರವೊಂದು ಅವನ ಕಣ್ಣಿಗೆ ಬಿದ್ದಿತು. ಅದನ್ನು ಎತ್ತಿದನು; ಹೆಂಡತಿಯ ಅಕ್ಷರಗಳಿಂದು ಗುರುತು ಹಿಡಿದು ಭಾವೋದ್ರೇಕದಿಂದ ವಿಸ್ಮಿತನಾಗಿ ತತ್ತರಿಸಹತ್ತಿದನು. ಪತ್ರಕ್ಕೆ ಅಂದಿನ ಅಂಚೆಯ ಮುದ್ರೆಯೇ ಇತ್ತು. ಪತ್ರವನ್ನು ತೆರೆದು ಓದತೊಡಗಿದನು :

' ತಂದೆಯೆ,—

' ಎಂದಿನಿಂದಲೂ ನಿನ್ನನ್ನು ತಂದೆಯೆಂದು ಕರೆಯುತ್ತ ಬಂದಂತೆ ಇನ್ನೂ ತಂದೆಯೆಂದೇ ಕರೆಯುತ್ತೇನೆ. ಈ ಪತ್ರವು ನಿನಗೆ ಮುಟ್ಟುವ ಮೊದಲೆ ನಾನು ಪರಲೋಕದಲ್ಲಿರುವೆನು. ಅಂತ್ಯಸಂಸ್ಕಾರವೂ ಆಗಿ ಬಿಡುವುದು; ಆದರಿಂದ ನೀನು ನನ್ನನ್ನು ಮನ್ನಿಸಲು ಶಕ್ತನೆಂದು ತಿಳಿದು ಕೊಂಡಿದ್ದೇನೆ.

' ನೀನು ನನ್ನನ್ನು ಉದಾರತನದಿಂದ ಮದುವೆಯಾದೆ; ನಾನ್ನ ನಿನ್ನವಳಾದೆ. ಚಿಕ್ಕ ಹುಡಿಗೆಯು ಪ್ರೀತಿಸುವಷ್ಟು ನಾನು ನಿನ್ನನ್ನು ಪ್ರೀತಿಸಿದೆನು. ನನ್ನ ತಂದೆಯನ್ನು-ಅದೇಕೆ-ಅದಕ್ಕೂ ಹೆಚ್ಚಾಗಿಯೇ ಪ್ರೀತಿಸುವಂತೆ ನಿನ್ನನ್ನು ಪ್ರೀತಿಸಿದೆನು. ಒಂದು ದಿನ ನಾನು ನಿನ್ನ ತೊಡೆಯ ಮೇಲಿದ್ದೆ; ನೀನು ನನ್ನನ್ನು ಅಪ್ಪಿಕೊಂಡು ಮುದ್ದಿಡುತ್ತಲಿದ್ದಿ.

ಆಗ್ಗೆಯೂ ನಾನು ನಿನ್ನನ್ನು 'ತಂದೆ'ಯೆಂದು ಕರೆದೆನು. ಆ ಸಂಬೋಧನೆಯು ನನ್ನ ಹೃದಯಾಂತರಾಳದಿಂದಲೇ ಸಹಜವಾಗಿ ನನಗೆ ಬರುತ್ತಿತ್ತು. ನೀನು ನನಗೆ ತಂದೆಯೇ ಇದ್ದಿ; ತಂದೆಯೇ ಅಲ್ಲದೆ ಇನ್ನೇನು! 'ನನ್ನ ಹುಡುಗಿಯೇ, ಯಾವಾಗಲೂ ಹಾಗೆಯೇ ಕರೆಯುತ್ತಿರು ನನ್ನನ್ನು; ನನಗದು ಸೇರುತ್ತದೆ' ಎಂದು ನೀನು ನಗುನಗುತ್ತ ನನಗೆ ಹೇಳುತ್ತಿದ್ದಿ.

'ನಾವು ಈ ಪಟ್ಟಣಕ್ಕೆ ಬಂದೆವು. ತಂದೆಯೇ, ಮನ್ನಿಸಬೇಕು. ನಾನು ಪ್ರೇಮಬದ್ಧಿತಳಾದೆನು. ಅಯ್ಯೋ! ಅದಕ್ಕೆ ಎದುರಾಳಿಯಾಗಿ ಎರಡು ವರುಷಗಳ ವರೆಗೆ ಎದೆಗೊಟ್ಟು ಹೋರಾಡಿದೆನು ಒಂದೆ ಸವನೆ ಎರಡು ವರುಷ! ಆ ಮೇಲೆ ಸೋತೆನು—ಬಲಿಬಿದ್ದೆನು. ನಾನು ತಪ್ಪು ಮಾಡಿದ ಹಾಳಾದ ಹೆಂಗುಸಾದೆನು.

'ಆದರೆ ಅವನು ಯಾರೆಂಬುವದನ್ನು ನೀನು ಕಲ್ಪಿಸಲಾರಿ. ನಾನು ಆ ವಿಚಾರವಾಗಿ ಬಹಳ ಶಾಂತಮನಸಿನವಳಿರುವೆನು. ಯಾಕೆಂದರೆ ನನ್ನೊಡನೆ, ನನ್ನ ಸತ್ತುಮುತ್ತು ಹನ್ನೆರಡು ಜನ ಅಧಿಕಾರಿಗಳು ಯಾವಾಗಲೂ ಇರುತ್ತಿದ್ದರು; ಅವರೆಲ್ಲರಿಗೆ ನೀನು ನನ್ನ 'ತಾರಾಗಣ' ವೆಂದು ಹೆಸರಿಟ್ಟು ಕರೆಯುತ್ತಿದ್ದಿಯಲ್ಲವೆ?

'ತಂದೆಯೇ, ಅವನಾರೆಂಬುದನ್ನು ಹುಡುಕಿ ತೆಗೆಯಲು ಯತ್ನಿಸಬೇಡ. ಇಲ್ಲದ ದ್ವೇಷವನ್ನು ಅವನಲ್ಲಿ ಬೆಳೆಯಿಸಬೇಡ. ನೀನು ಅದರ ಗೊಡವೆಗೆ ಹೋಗದಿರುವದೇ ಒಳಿತು. ಅವನೂ ನನ್ನನ್ನು ಅಂತಃಕರಣಪೂರ್ವಕವಾಗಿ ಪ್ರೀತಿಸುತ್ತಿದ್ದನೆಂಬವನ್ನು ನಾನು ಚನ್ನಾಗಿ ಬಲ್ಲೆನು.

'ಹೂಂ, ಕೇಳು! ಬೇಸಾನೆಸ್‌ದಲ್ಲಿ ವಾಯುಯಂತ್ರದ ಹತ್ತಿರ ತೀರ ಸಣ್ಣದೊಂದು ನಡುಗಡ್ಡೆಯಿದೆಯಲ್ಲವೆ? ಅಲ್ಲಿ ನಾವು ಒಂದು ದಿನ ಭೆಟ್ಟಿಯಾಗುವದೆಂದು ಗೊತ್ತು ಮಾಡಿದ್ದೆವು. ನಾನು ಈಸುವನೆವವನ್ನು ಮುಂದೆ ಮಾಡಿಕೊಂಡು ಅಲ್ಲಿಗೆ ಹೋಗುತ್ತಿದ್ದೆನು. ಅವನು ನನ್ನ ದಾರಿಕಾಯುತ್ತ ಗಿಡಗಂಟೆಗಳಲ್ಲಿ ಅಡಗಿ ಕುಳಿತುಕೊಳ್ಳುತ್ತಿದ್ದನು. ಅಂದರೆ ಸಾಯಂಕಾಲದ ವರೆಗೆ ಯಾರ ಕಣ್ಣಿಗೂ ಬೀಳದಂತೆ ಕೂಡಿರಲು ಅನುಕೂಲವಾಗಲೆಂದು ಹಂಚಿಕೆ ಹಾಕಿದೆವು. ನಾನವನನ್ನು ಕೂಡಿ

ಕೊಂಡೆನು. ಗುಪ್ತಸ್ಥಳವನ್ನು ಬಿಟ್ಟು ನಾವು ಟೊಂಗೆ-ಎಲೆಗಳನ್ನು ಸರಿಸುತ್ತ ಹೋಗಬರುವಷ್ಟರಲ್ಲಿ ನಿಮ್ಮ ದೂತನಾದ ಫಿಲಿಪ್ಪನು ನಮ್ಮ ಕಣ್ಣಿಗೆ ಬಿದ್ದನು. ಗಾಬರಿಯಾದೆವು. ನಮ್ಮದಿನ್ನು ಮೇಲೆ ತುಂಬಿ ಬಂದಿತೆಂದು ಚೀರಿಕೊಂಡೆನು. ಆಗ ಅವನು ನನಗೆ 'ಚಿಂತಿಸದಿರು, ನೀನು ಈಸುತ್ತ ಮನೆಗೆ ತೆರಳು. ಇವನನ್ನು ನನ್ನ ಪಾಲಿಗೆ ಬಿಟ್ಟುಕೊಡು. ನೋಡಿಕೊಳ್ಳುತ್ತೇನೆ' ಎಂದು ಹೇಳಿ ನನ್ನಲ್ಲಿ ಧೈರ್ಯವನ್ನುಂಟು ಮಾಡಿದನು.

'ನಾನು ನೊಂದಮನಸ್ಸಿನವಳಾಗಿ ಅಲ್ಲಿಂದ ಹೊರಟುಬಿಟ್ಟೆ. ನಿನ್ನ ಮನೆಗೆ ಬಂದೆನು. ದೊಡ್ಡ ಸಂಕಟವು ಪ್ರಾಪ್ತವಾಗುವದೆಂಬ ಭೀತಿಯು ಎದೆಯಲ್ಲಿ ನೆಟ್ಟಿತು.

ಒಂದು ತಾಸಿನ ಮೇಲೆ ದಿವಾಣಖಾನೆಯ ಹುಸಿಯಲ್ಲಿ ನನ್ನ ಕಣ್ಣಿಗೆ ಫಿಲಿಪ್ಪನು ಬಿದ್ದನು. 'ನಾನು ಅವನ ಅಪ್ಪಣೆಯ ಮೇರೆಗೆ ಬಂದಿದ್ದೇನೆ. ಏನಾದರೂ ಪತ್ರ-ಗಿತ್ರ 'ಕೊಡುವದಿದ್ದರೆ ಕೊಡಬಹುದು' ಎಂದವನು ಮೆಲ್ಲಗೆ ನನ್ನನ್ನು ವಿಚಾರಿಸಿದನು.

'ನಾನು ಪತ್ರಗಳೆಲ್ಲವನ್ನೂ ಕೊಟ್ಟೇ ಬಿಡುತ್ತಿದ್ದೆ. ಅವುಗಳನ್ನು ಮುಟ್ಟಿಸಿ ನನಗವನು ಉತ್ತರ ತರುತ್ತಿದ್ದನು.

'ಹೀಗೆ ಎರಡು ತಿಂಗಳು ನಡೆಯಿತು. ನೀನು ಅವನನ್ನು ನಂಬಿದಂತೆ ನಾವೂ ಅವನನ್ನು ನಂಬಿದೆವು.

'ನೋಡು ! ಈಗೇನು ಸಂಭವಿಸಿತೆಂಬದನ್ನು. ಒಂದು ದಿನ ನಾನು ಈಸುತ್ತ ಹೋಗುತ್ತಿದ್ದ ಅದೇ ನಡುಗಡ್ಡೆಯ ಮೇಲೆ ನಿಮ್ಮ ಅಡ್ಡಿಯಾದ ಫಿಲಿಪ್ಪನು ಭೆಟ್ಟಿಯಾದನು. ಇದೇ ಸಲವೇ ಅವನು ಮತ್ತೆ ಬಂದುದು. ನನ್ನ ಆಶೆಯಿಂದ ಅವನು ಬಂದಿದ್ದನು. ನಮ್ಮ ಗುಟ್ಟನ್ನು ನಿನ್ನಲ್ಲಿ ರಟ್ಟು ಮಾಡುವೆನೆಂದು ಬೆದರಿಸಿದನು. ನಾನು ಅವನಿಗೆ ವಶಳಾಗದಿದ್ದರೆ, ತಾನು ಕದ್ದುಕೊಂಡಿಟ್ಟಿದ್ದ ಪತ್ರಗಳನ್ನು ನಿನಗೆ ತೋರಿಸುತ್ತೇನೆಂದೂ ಹೆದರಿಕೆ ಹಾಕಿದನು.

'ಅಯ್ಯೋ-ಪ್ರಿಯತಂದೆಯೇ-ನಾನು ಅಂಜುಬುರಿಕಿಯಂತೆ ಎದೆಗೆಟ್ಟವಳಾದೆ. ನನ್ನಿಂದ ವಂಚಿತವಾದ ನಿನ್ನ ಪ್ರೇಮಕ್ಕಾಗಿ ಬಲು

ಬೆದರಿದೆನು. ನನ್ನ ಮನಿಗಾಗಿಯೂ ಹೃದಯವು ಕಾತರಿಸಹತ್ತಿತು. ನೀನು ಅವನನ್ನು ಎಲ್ಲಿ ಕೊಂದುಹಾಕುವಿಯೋ ಎಂದೂ, ನನ್ನ ಗತಿಯೇನಾದೀ ತೆಂದೂ ವಿಹ್ವಲಳಾದೆನು. ಆ ಕೊರಗನ್ನೇನು ಹೇಳಲಿ ನಾನು? ದಿಗಿಲು ಗೊಂಡವಳಾಗಿ ಇವನನ್ನು ಬಗಲಲ್ಲಿ ಹಾಕುವದೊಳಿತೆಂದು ಗೊತ್ತು ಮಾಡಿದೆನು. ಅವನೂ ನನ್ನನ್ನು ಅಷ್ಟೇ ಪ್ರೀತಿಸುತ್ತಿದ್ದನು. ಅದೆಂಥ ನಾಚಿಕೆ! ತಿಳಿಯದೆ ಹೋಯಿತು.

'ನಾವು–ಹೆಂಗಸರು ನಿಮಗಿಂತ ಬಲುಬೇಗನೆ ಬುದ್ಧಿಗೆಡುವೆವು; ಒಮ್ಮೆ ಕೆಟ್ಟೆವೆಂದರೆ ತೀರಿತು–ಕೀಳ್ತಿಸೆಯ ಪರಮಾವಧಿಗಿಳಿಯುವೆವು. ನಾನೇನು ಮಾಡುತ್ತಿದ್ದೆನೆಂಬದನ್ನು ನಿನಗೆ ಯಾವ ಬಾಯಿಂದ ಹೇಳಲಿ? ಈ ಇಬ್ಬರಲ್ಲಿ ಒಬ್ಬರು ಸಾವಿಗೆ ತುತ್ತಾಗದಿದ್ದರೆ ನಾನು ಬದುಕುವುದು ಸಾಧ್ಯವಿಲ್ಲೆಂದು ಈ ಪಶುವಿಗೂ ನನ್ನನ್ನು ಅರ್ಪಣೆ ಮಾಡಿಕೊಂಡೆನು.

'ನನ್ನ ಮಟ್ಟಿಗೆ ನಾನೇನನ್ನೂ ಬಚ್ಚಿಟ್ಟುಕೊಳ್ಳಲಾರೆ. ಎಲ್ಲವನ್ನೂ ತೋಡಿಕೊಂಡಿದ್ದೇನೆ.

'ಈ ಮುಂದೆ ನಾನೆಣಿಸಿದಂತೆ ಸಂಭವಿಸಿಯೇ ಸಂಭವಿಸಿತು; ತನಗೆ ಬೇಕಾದಾಗ್ಗೆ ನನ್ನನ್ನು ಬೆದರಿಸಿ, ಹೆದರಿಸಿ ಮೇಲಿಂದಮೇಲೆ ಅವನೂ ನನ್ನನ್ನು ಉಪಭೋಗಿಸಹತ್ತಿದನು. ಅವನಂತೆ ಇವನೂ ನನ್ನ ಜೊತೆಗಾರನಾಗಿಯೇ ಬಿಟ್ಟನು. ತೀರ ಹೇಸಿಗೆಲಸವಲ್ಲವೇ? ತಂದೆಯೇ, ಎಂಥ ಶಿಕ್ಷೆಯಿದು!

'ನಾನು ಆತ್ಮಹತ್ಯ ಮಾಡಿಕೊಳ್ಳಬೇಕೆಂದು ಕಟ್ಟಕಡೆಗೆ ನಿರ್ಧರಿಸಿದೆನು. ಬದುಕಿಕೊಂಡೇ ನಾನು ನಿನಗೆ ಈ ಅಪರಾಧವನ್ನು ಒಪ್ಪಿಕೊಂಡು ತಿಳಿಸುವದು ನನ್ನಿಂದಾಗುತ್ತಿದ್ದಿಲ್ಲ; ಅಸಾಧ್ಯವಾದ ಮಾತ್ತು. ಸತ್ತೆನೆಂದರೆ ನಾನೆಲ್ಲವನ್ನೂ ಸಹಿಸಬಲ್ಲೆ; ದಹಿಸಿಕೊಳ್ಳಬಲ್ಲೆ. ನನಗೆ ಬೇರಿನ್ನಾವ ಗತಿಯುಳಿಯಲಿಲ್ಲ; ನನ್ನ ದುಷ್ಟ ಕೃತ್ಯದ ಪರಿಮಾರ್ಜನವನ್ನು ಮಾಡಿಕೊಳ್ಳಲು ಕೊಂದುಕೊಳ್ಳದ ಹೊರತು ನನಗೆ ದಾರಿಯಿಲ್ಲದಾಯಿತು ನಾನು ಯಾರನ್ನೂ ಪ್ರೀತಿಸಲಾರೆ; ಯಾರೂ ನನ್ನನ್ನು ಪ್ರೀತಿಸಲಾರರು. ನನ್ನ ಅಸ್ತಿತ್ವವೇ ನನ್ನನ್ನು ಕೊರಗಿಸಹತ್ತಿತು.

' ಇನ್ನೊಂದು ಸ್ವಲ್ಪ ಹೊತ್ತಿನಲ್ಲಿ ನಾನು ಜಲಸಮಾಧಿಸ್ಥಳಾಗುವೆನು ತಿರುಗಿ ಬಾರೆನು.

' ನಿನಗಾಗಿ ಬರೆದ ಈ ಪತ್ರವು ಮೊದಲು ಅವನಿಗೆ ತಲುಪುವದು. ಅವನಿಗೂ ಈ ಪತ್ರವು ನನ್ನ ಅಂತ್ಯವಾದ ಮೇಲೆಯೇ ಮುಟ್ಟುವುದು. ನನ್ನ ಕಡೆಯ ಇಚ್ಛೆಯ ಮೇರೆಗೆ ಅವನು ಪತ್ರದಲ್ಲಿಯ ವಿಷಯದ ಸಂದರ್ಭವನ್ನು ಅರಿತುಕೊಳ್ಳಲಾರದೆ ನಿನ್ನ ಕಡೆಗೆ ಅದನ್ನು ಕಳಿಸುವನು. ನನ್ನ ಮರಣದ ವಿಧಿಯನ್ನು ಪೂರೈಸಿ ಮನೆಗೆ ಬಂದಮೇಲೆ ಅದು ನಿನ್ನ ಕೈಗೆ ದೊರೆಯುವದು.

' ಹೋಗಿಬರುವೆನು ತಂದೆಯೇ, ನಮಸ್ಕಾರಗಳು. ಇದಕ್ಕೂ ಹೆಚ್ಚಿಗೇನು ಹೇಳಲಿ ? ನಿಜವಾಗಿಯೂ ಏನೂ ಉಳಿಯಲಿಲ್ಲ ಏನು ಮಾಡುವಿಯೋ ಮಾಡಿಕೊಳ್ಳು ನನ್ನನ್ನು ಮಾತ್ರ ಕ್ಷಮಿಸು

ದಳವಾಯಿಯ ಮೈ ತುಂಬ ಬೆವರಿತು; ಹಣೆಯ ಮೇಲಿನ ಬೆವರಿನ ಹನಿಗಳನ್ನು ಒರಿಸಿಕೊಂಡನು. ಆತ್ಮಸಂಯಮನ, ಯುದ್ಧಗಳಲ್ಲಿ ತನಗುಪಯೋಗವಾಗುತ್ತಿದ್ದ ಶಾಂತತೆ ಒಮ್ಮೆಲೇ ಅವನ ಮೈದುಂಬಿ ಬಂದಂತಾದವು. ಅವನು ಸುಮ್ಮನೆ ಕೆಲಹೊತ್ತು ಕುಳಿತ ಬಿಟ್ಟನು.

ಆ ಮೇಲೆ ಗಂಟೆಯನ್ನು ಬಾರಿಸಿದನು. ಸಿಪಾಯಿಯು ಬಂದು ಎದುರಿಗೆ ನಿಂತನು.

' ಫಿಲಿಪ್ಪನನ್ನು ಕಳಿಸಿಕೊಡು ' ಎಂದು ಹೇಳುತ್ತ ಕಪಾಟಿನ ಬಾಗಿಲವನ್ನು ಅರ್ಧ ತೆರೆದನು.

ಕೆಂಪುಗಲ್ಲ, ದಟ್ಟವಿಸಾಸೆಯ ಎತ್ತರವಾದ ಮನುಷ್ಯನು ಕೂಡಲೆ ಬಂದನು. ಕಪಟ ಮುಖಭಾವವು, ಠಕ್ಕು ಕಣ್ಣುಗಳು ಮಾತ್ರ ಒಡೆದು ಕಾಣುತ್ತಿದ್ದವು.

ದಳವಾಯಿಯು ಅವನನ್ನು ಆಪಾದಮಸ್ತಕಪರ್ಯಂತ ನೆಟ್ಟ ನೋಟದಿಂದ ನೋಡಿದನು. ರಾವಿಗೆದ್ದವನಂತೆ ತೋರುತ್ತಿದ್ದನು.

' ನನ್ನ ಹೆಂಡತಿಯ ಸಂಗಡಿಗನ ಹೆಸರನ್ನು ಹೇಳು.'

‘ ಏ........ನ........ರಿ—ರಾ........ವ........ಸಾ........ಬ್ ’

ಅರ್ಧ ತೆರೆದ ಕಪಾಟಿನೊಳಗಿಂದ ಕೈಕೋವಿಯನ್ನು ತೆಗೆದುಕೊಂಡನು. ‘ ಹೊತ್ತುಗಳೆಯಬೇಡ. ನಾನು ಸಹಿಸೆನು. ಹೇಳೊ ಈಗ-ಬೇಗನೆ........’

‘ ಆಂ........ಆಂ........ರಾ........ವ....ಸಾ ...ಬ....ಆ....ಕ್ಯಾಪ್ಟನ್ನ ಸೆಂಟ್ ಆಲ್ಬರ್ಟ ’ ಎಂದು ನಡಗುವ ದನಿಯಿಂದ ಕಡೆಯ ಅಕ್ಷರವನ್ನು ಅವನು ಮುಗಿಸಿರಲಿಲ್ಲ—ಧಡಮ್ಮೆಂದು ಸಪ್ಪಳವಾಯಿತು. ಕಣ್ಣು ಕತ್ತಲು ಗೂಡಿಸಿತು. ಹಣೆಯಲ್ಲಿ ಗುಂಡು ಪಾರಾಯಿತು. ದೊಪ್ಪೆಂದು ಶವವು ನೆಲಕ್ಕುರುಳಿತು.



# ಚಕ್ರತೀರ್ಥ

ಲ್ಯಾಬೂಜ್ ಕಂಪನಿಯಲ್ಲಿ ಲೇವಾಸನು ಕಾರಕೂನನಾಗಿದ್ದು ಕೊಂಡೇ ಮುದುಕನಾಗಿದ್ದನು. ಒಂದಿಳಿಹೊತ್ತು ಅಂಗಡಿಯನ್ನು ಬಿಟ್ಟು ಹೊರಬಿದ್ದನು. ಎಂದೆಂದೂ ನೋಡದವನು—ನೋಡುತ್ತಾನೆ—ಸುತ್ತೂ ಕಡೆಗೂ ಹರಡಿರುವ ಕೆಂಪು—ಹಳದಿ ಮಿಶ್ರಿತವಾದ ಪ್ರಕಾಶವನ್ನು. ಬೆಳಕಿಗೆ ಕಣ್ಣು ಮಿನುಗಿದವು; ನಿಂತಲ್ಲಿಯೇ ನಿಂತನು. ಅಂಗಡಿಯ ತೀರ ಹಿಂಬದಿಯ ತಗ್ಗಿನಲ್ಲಿರುವ ಕನ್ನಡಿ—ಹಂಚಿನ ಬೆಳಕು ಬಿದ್ದಿರುವ ಜಾಗೆಯಲ್ಲಿ ಕುಳಿತು ಇಡಿಯ ದಿನವೆಲ್ಲವೂ ಅವನ ದುಡಿತ; ಕಕ್ಕಸ ಬಡಿಸುತಿರುವ ಬೇಸಿಗೆಯ ಬಿಸಿಲುಗಾಲದ ಬೆಳಕಿನಲ್ಲಿಯೂ—ಹಗಲು—ಹಾಡೇ—ಕತ್ತಲೆಯನ್ನು ಹೋಗಲಾಡಿಸುವ ಕೃತ್ರಿಮಪ್ರಕಾಶವನ್ನು ಕೆಡವಿಕೊಂಡು, ಕೋಣೆಯಲ್ಲಿ ಕುಳಿತೇ ಲೇವಾಸನು ಒಂದೇ ಸವನೆ ನಾಲ್ವತ್ತು ವರುಷಗಳನ್ನು ಕಳೆದಿದ್ದನು.

ಜವುಳು ಭೂಮಿಯ ಹಾಗೆ ನೆಲವೆಲ್ಲವೂ ತೇವಿನಿಂದ ಯಾವಾಗಲೂ ತಪತಪಗುಡುತ್ತಿತ್ತು. ಹೊರಗಣ ಹವೆ ಬರಲು ಯಾವ ದಾರಿಯಿಲ್ಲದ್ದರಿಂದ ಹೊಲಸು ನಾತವು ಕೋಣೆಯಲ್ಲಿ ಇಡಗಿರುತ್ತಿತ್ತು.

ನಾಲ್ವತ್ತು ವರುಷಗಳ ವರೆಗೆ ಲೇವಾಸನು ಈ ತುರಂಗಕ್ಕೆ ಬೆಳಿಗ್ಗೆ ಎಂಟು ಗಂಟೆಗೆ ಪ್ರತಿದಿನವೂ—ತಪ್ಪದೆ—ಸರಿಯಾದ ವೇಳೆಗೆ ಬರುವನು; ಸಾಯಂಕಾಲ ಏಳು ಗಂಟೆಯ ವರೆಗೆ ಕುಳಿತಲ್ಲಿಂದ ಕದಲದೆ ಲೆಕ್ಕ—ಪತ್ರ ಬರೆಯುವದು—ಲೇವಾದೇವಿ—ಖಾತೆ—ಕೀರ್ದಿ, ಬೋಡ—ಬಾಕಿ ಪುಸ್ತಕಗಳನ್ನು ಬಿಚ್ಚಿಕೊಂಡು ಕುತ್ತಿಗೆಯನ್ನು ಮೇಲಕ್ಕೆತ್ತದೆ ಕತ್ತೆಯ ಹಾಗೆ ದುಡಿಯುವದೇ ಅವನ ದೈನಂದಿನ ಕರ್ಮವಾಗಿದ್ದಿತು.

ಅವನ ವಾರ್ಷಿಕ ಸಂಬಳವು ೧೫೦೦ ಫ್ರಾಂಕುಗಳಿಂದ ಆರಂಭವಾಗಿ ಈಗ ೩೦೦೦ದ ಮನೆಯನ್ನು ಮುಟ್ಟಿದೆ. ಹೆಂಡತಿಯನ್ನು ಗಂಟುಹಾಕಿಕೊಳ್ಳುವಷ್ಟು ಸಾಂಪತ್ತಿಕ ಸ್ಥಿತಿಯಿಲ್ಲದ್ದರಿಂದ ಅವನಿನ್ನೂ ಬ್ರಹ್ಮಚಾರಿಯಾಗಿಯೇ ಉಳಿಯಬೇಕಾಗಿತ್ತು. ಅದು ಕೊನೆ ಮುಟ್ಟದ ಮಾತೆಂದು

ಆದರ ಗೊಡವೆಗೆ ಹೋಗದೆ ಸುಮ್ಮನಿದ್ದನು; ವಿಚಾರವನ್ನೇ ಬಿಟ್ಟಿದ್ದನು. ಎಂದಿಗೂ ಬದಲಾಯಿಸದ ಏಕರೀತಿಯ ಕೆಲಸಕ್ಕೆ ಬೇಸತ್ತಿದ್ದರೂ ಒಮ್ಮೊಮ್ಮೆ ತನ್ನ ಮನಸಿನಲ್ಲಿಯೇ—' ದೇವರೇ, ೫೦೦೦ ಗಳಿಕೆಯಾಗಿದ್ದರೆ ನನ್ನ ಜೀವನವು ಎಷ್ಟು ಸುಖಾವಹವಾಗಬಹುದಿತ್ತು! ' ಎಂದು ಇಲ್ಲದ ಸಮಾಧಾನವನ್ನು ತಂದುಕೊಳ್ಳುತ್ತಿದ್ದನು. ಆದರೆ ಅವನ ಹಣೆಯಬರಹದಲ್ಲಿ ಅದು ಲಭ್ಯವಿರಲಿಲ್ಲ. ಒರತೆಯ ನೀರಿನಂತೆ ತಿಂಗಳೂ ಬರುವ ಸಂಬಳದ ಹೊರತು, ಗಳಿಕೆಗೆ ಬೇರೆ ಮಾರ್ಗವಾವುದೂ ಇರಲಿಲ್ಲೆಂದು ಆ ಇಚ್ಛೆಯನ್ನು ಹತ್ತಿಕ್ಕಿರಿಸಿದ್ದನು.

ಸಾಹಸ–ಪ್ರಯತ್ನಗಳು, ಮೋಹಕ ಪ್ರಸಂಗಗಳು, ಎಂದಿಗೂ ಅವನ ಜೀವನದಲ್ಲಿ ತಲೆದೋರಲಿಲ್ಲ. ಇಷ್ಟೇ ಏಕೆ–ಮಹತ್ವಾಕಾಂಕ್ಷೆಯಾದರೂ ಬೇಡವೆ?–ಅದೂ ಕೇಳಬೇಡಿ. ಸವಿಗನಸುಗಳ ಮಂದಿರವನ್ನು ಕಟ್ಟುವ ಮಾನವನ ಸಹಜಪ್ರವೃತ್ತಿಯೂ ಕೂಡ ಅವನ ಅಭಿಲಾಷೆಗಳ ಬೀಜದಲ್ಲಿ ಎಂದಿಗೂ ಅಂಕುರಿಸದೆ ಹೋಗಿತ್ತು.

ತನ್ನ ೨೧ನೆಯ ವರುಷದಲ್ಲಿಯೇ ಲ್ಯಾಬೂಜ್ ಕಂಪನಿಯಲ್ಲಿ ಸೇರಿಕೊಂಡನು. ಹೊರಗೆಂದೂ ಹೊರಬೀಳಲಿಲ್ಲ

೧೮೫೬ರಲ್ಲಿ ಅವನ ತಂದೆಯು ತೀರಿದನು. ೧೮೫೯ರಲ್ಲಿ ತಾಯಿಯೂ ಇಹಲೋಕದ ಯಾತ್ರೆಯನ್ನು ಮುಗಿಸಿದಳು. ೧೮೬೮ರ ವರೆಗೆ ಯಾವ ಬದಲಾವಣೆಯಾಗಲಿಲ್ಲ. ಈಗ ಮಾತ್ರ ಇದ್ದ ಮನೆಯನ್ನು ಬಿಡಬೇಕಾಗಿ ಬಂತು ಮನೆಯ ಯಜಮಾನನು ಬಾಡಿಗೆಯನ್ನು ಹೆಚ್ಚಿಸಿದನೆಂದು ಬೇರೆ ಮನೆಗೆ ಹೋಗಬೇಕಾಯಿತು–ಇಷ್ಟೇ.

ಪ್ರತಿ ದಿನವೂ ಸರಿಯಾಗಿ ೬ ಗಂಟೆಗೆ ಬಡಿದುಕೊಳ್ಳುವ ಗಂಟೆಯು ಚೀರಿದೊಡನೆ ಹಾಸಿಗೆಯಿಂದ ಜಿಗಿದೇಳುವನು. ೧೮೬೬ ಹಾಗೂ ೭೪ರಲ್ಲಿ ಮಾತ್ರ ಗಡಿಯಾರದ ಯಂತ್ರವು ಕೆಟ್ಟು ಹೋಗಿತ್ತು; ಆದರೂ ಒಳ್ಳೆ ಕೆಲಸವನ್ನು ಕೊಟ್ಟಿತ್ತು. ಎದ್ದವನೆ ಹಾಸಿಗೆ ಸುತ್ತುವುದು, ಕೋಣೆಯ ಕಸಗೂಡಿಸುವುದು, ಕುರ್ಚಿ–ಮೇಜುಗಳ ಮೇಲಿನ ದೂಳನ್ನು ಒರಿಸಿ

ಸೀಟಾಗಿರಿಸುವುದು, ಮುಖ ಮಾರ್ಜನ ತೀರಿದ ಮೇಲೆ ಪೋಷಾಕು ಹಾಕಿಕೊಳ್ಳುವುದು ಮೊದಲಾದ ವಿಧಿಗಳಿಗೆ ೧|| ಗಂಟೆ ಹಿಡಿಯುತ್ತಿತ್ತು.

ಆ ಮೇಲೆ ಲಾಹೂರರ ಬೇಕರಿಗೆ ಹೋಗಿ ರೊಟ್ಟಿಯನ್ನು ತರುವುದು. ಇದೇ ಅಂಗಡಿಯಲ್ಲಿಯೇ ರೊಟ್ಟಿಗಳನ್ನು ಇಷ್ಟು ವರುಷಗಳವರೆಗೂ ಕೊಂಡುಕೊಳ್ಳುತ್ತಿದ್ದುದರಿಂದ ಅವನಿಗೆ ೧೧ ಯಜಮಾನರ ಪರಿಚಯವಾಗಿತ್ತು; ಅಂಗಡಿಯ ಹೆಸರು ಮಾತ್ರ ಬದಲಾಗಿರಲಿಲ್ಲ. ಹೊತ್ತಿಗೆ ನಿಲುಕಬೇಕಾಗುವದರಿಂದ ಲಗುಬಗೆಯಿಂದ ನ್ಯಾರಿಯೋ-ಊಟವೋ ಏನೋ ತೀರಿಸಿಕೊಂಡು ಅಂಗಡಿಗೆ ಹೋಗುತ್ತಿದ್ದನು.

ಅವನ ಇಡಿಕಿಡಿ ಬಾಳು ಕತ್ತಲುಗವಿಯಾದ ಕಚೇರಿ ಕೋಣೆಯಲ್ಲಿ ಯಥಾಪ್ರಕಾರವಾಗಿ ಸಾಗಿದೆ ಬ್ರುಮೆಂಟನ ಸಹಾಯಕನಾಗಿ ಹರೆಯದಲ್ಲಿಯೇ ಈ ಕೆಲಸವನ್ನು ಕೈಕೊಂಡಿದ್ದನು, ಮುಂದೆ ತನಗೂ ಆ ಸ್ಥಳವು ದೊರಕಬಹುದೆಂಬ ಆಶೆಯಿಂದ. ಅವನ ಇಚ್ಛೆ ಕೈಗೂಡಿತು. ಇನ್ನಾವ ಬೇರೆ ಇಚ್ಛೆಯೂ ಅವನಿಗುಳಿಯಲಿಲ್ಲ

ಜನರು ತಂತಮ್ಮ ಜೀವಮಾನದಲ್ಲಿ ಬೇರೆ ಬೇರೆ ತರದ ಸೊಗಸಾದ ಸುಗ್ಗಿಯನ್ನು ಒಕ್ಕಬಯಸುತ್ತಾರೆ ಆಕಸ್ಮಿಕ ಸಂಭವಗಳು, ಹರ್ಷಾಂತ ಇಲ್ಲವೆ ದುಃಖಾಂತ ಪ್ರಣಯಕಲಹಗಳು, ಸಾಹಸದ ಪ್ರವಾಸಗಳು-ಇವೇ ಮೊದಲಾದ ಸ್ವತಂತ್ರ ಜೀವಿತದ ಆಶೆ-ಆಕಾಂಕ್ಷೆಗಳು, ಸುಖ-ಸಂತೋಷಗಳು ಇವನಿಗೆ ಮಾತ್ರ ಮೋಸಮಾಡಿ ಮರೆಯಾಗಿದ್ದವೋ-ಅಥವಾ ಇವನೇ ಅವುಗಳನ್ನು ತ್ಯಜಿಸಿದ್ದನೋ ಯಾವುದೂ ಹೇಳಲು ಬರುವಂತಿಲ್ಲ. ಅಂತೂ ಸುಖಾಭಾಸವಾದರೂ ಅವನಿಗೆ ಸೋಂಕದೆ ಬಿಟ್ಟಿದ್ದು ಆಶ್ಚರ್ಯಕರವಾಗಿ ತೋರದಿರಲಾರದು. ದಿನಗಳು ವಾರಗಳು, ತಿಂಗಳು, ಋತುಗಳು, ವರುಷಗಳೆಲ್ಲವೂ ಇವನ ಪಾಲಿಗೆ ಒಂದೇ ಪಡಿಯಚ್ಚಿನ ಪ್ರತಿಮೆಗಳಾಗಿದ್ದವು. ಪ್ರತಿದಿನವೂ ಏಳುವ ಹೊತ್ತಿಗೇ ಏಳುವುದು, ಅಂಗಡಿಗೆ ಹೋಗುವುದು, ಕಚೇರಿ ಕೆಲಸ, ತಿರುಗಿ ಬಂದೊಡನೆ ಊಟ, ಆಮೇಲೆ ಏಳುವ ಹೊತ್ತಿನವರೆಗೆ ಮಲಗುವುದು. ಈ ಸುಳಿಯಲ್ಲಿ ತಿರುಗಿಯೇ ತಿರುಗುವುದು. ತಿಲಮಾತ್ರವಾದ ಬದಲಾವಣೆ

ಯಾಗಿರಲಿಲ್ಲ—ಇಷ್ಟು ವರುಷಗಳ ಅವನ ಜೀವನದಲ್ಲಿ. ಇಂದು ಹೀಗೆ ಕಳೆಯಿತೆನ್ನುವಷ್ಟರಲ್ಲಿ ನಾಳೆ-ನಾಡದು—ಆಚೆಯ ನಾಡದು, ಹೀಗೆಯೆ ಒಂದರ ಹಿಂದೊಂದು ಕಳೆಯುತ್ತ ಇಂದಿನವರೆಗೆ ಸಾಗುತ್ತ ಬಂದಿದೆ. ಹೀಗೆಯೇ ಅನಂತಕಾಲವೂ ಸಾಗುವದೇ.

ಹಿಂದಕ್ಕೆ ಯಾವಾಗೋ—ಏನೋ—ಒಮ್ಮೆ ಒಂದು ದಿನ ಹಿಂದಿನ ಕಾರಕೂನನು ಮರೆತುಹೋದ ಕನ್ನಡಿಯಲ್ಲಿ ಲೇವಾಸನು ತನ್ನ ಮುಖವನ್ನು ನೋಡಿಕೊಂಡಿದ್ದನು. ತುಂಬಿದ ಗಲ್ಲಗಳು, ಕಪ್ಪನ್ನ ಮೀಸೆ-ತಲೆಗೂದಲಗಳನ್ನು ನೋಡಿ ತಾನೊಬ್ಬ ಸುಂದರ ಯುವಕನೆಂದೆಂದು ಕೊಂಡಿದ್ದನು. ಇಂದು ಅದೇ ಕನ್ನಡಿಯಲ್ಲಿ ಮುಖವನ್ನು ನೋಡಿಕೊಂಡನು. ಬೆಳ್ಳಗಾದ ಮೀಸೆ, ಸಪಾದ ತಲೆ, ಮುದುಡಿದ ಗಲ್ಲಗಳು, ಒಳಸಿಕ್ಕ ಕಣ್ಣುಗಳನ್ನು ನೋಡಿಕೊಂಡು ಬೆರಗುಗೊಂಡನು. ನಾ....ಲ್ವ... ತ್ತು ವರುಷಗಳು! ಅಬ್ಬಾ! ಒಂದರ ಹಿಂದೊಂದು! ದುಃಖದ ದಿನದಂತೆ....! ನಿದ್ರೆ ಹತ್ತದ ರಾತ್ರಿಯಂತೆ!! ತಂದೆ ತಾಯಿ ಸತ್ತಮೇಲೆ ಏನೊಂದು ದುಃಖವಿಲ್ಲದೆ ಕೆಡುಕಿಲ್ಲದೆ ಸುಖವಿಲ್ಲದೆ-ಅವನ ದಿನಗಳು ಕಳೆದು ಹೋಗಿದ್ದವು. ಯಾವ ಅಭ್ಯಂತರವಿಲ್ಲದೆ ಕಾಲವು ಗತವಾಗಿತ್ತು.

* * * *

ಇಂದು ಮಾತ್ರ ಲೇವಾಸನು ಬೀದಿಯಲ್ಲಿ ಬೆರಗಾಗಿ ನಿಂತು ಸೂರ್ಯನ ಪ್ರಕಾಶದಿಂದ ಮರುಳುಗೊಂಡಿದ್ದನು. ಈ ಸಮಯದಲ್ಲಿ ಮನೆಗೆ ಹೋಗುವುದು ಬಿಟ್ಟು, ವರುಷದಲ್ಲಿ ತಾನು ೨—೩ ಸಲವಾದರೂ ಹೆಸರಿಗೆ ಅಡ್ಡಾಡಲು ಹೋದಂತೆ, ಇಂದು ಊಟದ ಹೊತ್ತಿನವರೆಗಾದರೂ ಅಲೆದಾಡಿ, ತಿರುಗಾಟದ ಸುಖವನ್ನು ಭೋಗಿಸಬೇಕೆಂದು ನಿಶ್ಚಯಿಸಿದನು.

ಗಟ್ಟಿ ಮನಸುಮಾಡಿ ತಿರುಗಾಡುತ್ತ ಹೊರಟವನು ಹತ್ತೆಂಟು ನಿಮಿಷಗಳಲ್ಲಿ ಜನರಿಂದ ತುಂಬಿದ ಬೀದಿಗೆ ಬಂದನು. ಎರಡೂ ಬದಿಗಿರುವ ಗಿಡ-ಮರಗಳ ಕೆಳಗೆ ಸಾವಿರಾರು ಜನರು ಬರಹೋಗುವುದನ್ನು ಕಂಡನು.

ವಸಂತಾಗಮನದ ಇಳಿಹೊತ್ತು– ಕೇಳುವದೇನು– ಜೀವನಕ್ಕೆ ಸುಖ ವಾತಾವರಣವುಂಟಾಗುವ ಹುಚ್ಚು ಸಮಯ! ಬಹು ರಮ್ಯವಾದುದು.

ಲೇವಾಸನು ಮಧುಕರ ನಡಿಗೆಯಂತೆ ಮೆಲ್ಲನೆ ಸಾಗಿದ್ದನು. ಅವನ ವೈ–ಮನಕುಂಟಾದ ಉತ್ಸಾಹ, ಆನಂದ ಅವನ ಕಣ್ಣಲ್ಲಿ ಒಡ ಮೂಡಿದಂತೆ ಕಾಣಿಸುತ್ತಿತ್ತು. ರಮಣೀಯ ಕಾಲ! ಇನ್ನುಳಿದ ಜಗತ್ತು ಸುಖವನ್ನು ಸವಿಯುವಂತೆ ಅವನೂ ಅಂದು ಸುಖದ ಕಣಸಿಗ ನಾಗಿದ್ದನು. ಅತ್ತಿತ್ತ ನೋಡುತ್ತ ಬಲು ಆಶ್ಚರ್ಯಚಕಿತನಾಗಿ ಮುಂದೆ ಸಾಗಿದನು.

ಆಕಾಶವೆಲ್ಲವೂ ಮಂದವಾದ ಬೆಂಕಿಯಲ್ಲಿ ಪ್ರಕಾಶವಾದಂತೆ ಕಾಣುತ್ತಿತ್ತು. ಕ್ಷಿತಿಜವೆಂಬ ಮನೆಗೆ ಬೆಂಕಿಯು ತಗುಲಿದಂತೆ ಕೆಂಬಣ್ಣವು ಸೂರೆಯಾಗಿತ್ತು. ಮುಂದೆ ಮುಂದೆ ಸಾಗಹತ್ತಿದ. ದಣಿದವನಾಗಿ ಹತ್ತಿರ ಕಂಡ ವಿಶ್ರಾಂತಿಗೃಹದಲ್ಲಿ ಊಟವನ್ನು ತೀರಿಸಲು ಕಾಲಿಕ್ಕಿದನು.

ರುಚಿಕರವಾದ ಪದಾರ್ಥಗಳೊಡನೆ ಊಟವನ್ನು ಮುಗಿಸಿದನು. ಇಂಥ ಸವಿಯಾದ ಅಡಿಗೆಯನ್ನು ಅವನೆಂದೂ ಬಹು ವರುಷಗಳಲ್ಲಿ ಕಂಡಿಲ್ಲಾದ್ದರಿಂದ ಮನಸೋಕ್ತ ಸವಿ–ಸವಿಮಾಡಿಕೊಂಡು ಅಂದು ಹೊಟ್ಟೆತುಂಬ ಉಂಡನು. ಮೇಲೊಂದು ಪೇಲೆ ರುಚಿಕರವಾದ ಮದಿರೆ ಯನ್ನು ಕುಡಿದು ಸಂತೃಪ್ತನಾದನು

ಊಟದ ಬೆಲೆಯನ್ನು ಕೊಟ್ಟನು; ಕೊಡುವಾಗ್ಗೆ—ಮಿಕಿ ಮಿಕಿ ನೋಡಿದರೂ–ಆನಂದ ತುಂದಿಲನಾಗಿದ್ದನು 'ಎಂಥ ರಾತ್ರಿ ಇಂದಿನದು! ಎಷ್ಟು ಆಲ್ಹಾದದಾಯಕವಾದುದು! ಹುಟ್ಟಿದುದಕ್ಕೆ ಜನ್ಮಸಾರ್ಥಕ ವಾಯಿತು' ಎಂದು ತನ್ನಷ್ಟಕ್ಕೆ ತಾನೇ ಬಾಯಿಬಿಚ್ಚಿ ಮಾತಾಡಿ ಕೊಳ್ಳುತ್ತ ಇನ್ನಿಷ್ಟು ತಿರುಗಾಡುವೆನೆಂಬ ಹುರುಪಿನಿಂದ ನಡೆದನು. ಅವನಿಗಾದ ಆನಂದವು ಎಷ್ಟು ವರುಷಗಳಿಂದ ದಾರಿ ಕಾಯುತ್ತಲಿತ್ತೋ ಏನೋ!

ತನ್ನ ನೆರೆಹೊರೆಯವರ ಮನೆಯಲ್ಲಿ ಒಂದು ಚಿಕ್ಕ ಹುಡುಗಿ ಯಾವಾಗಲೂ ಗೊಣಗುಡುತ್ತಿದ್ದ ಹಾಡೂ ಅವನಿಗೆ ಒಮ್ಮೆಲೆ ಬಾಯಿಗೆ

ಬಂದಿತು. ಅದನ್ನೇ ಗಟ್ಟಿಯಾಗಿ ಅಂದುಕೊಳ್ಳುತ್ತ ಮನದಲ್ಲಿಯೇ ಆನಂದಪರವಶನಾಗಿದ್ದಂತೆ ಕಂಡನು.

ತಿರುಗೂ-ಮುರುಗೂ ಪಲ್ಲವಿಯಂತೆ ಆ ಹಾಡನ್ನು ಹಾಡೇ ಹಾಡಿದನು. ಪ್ಯಾರಿಸ್ ಪಟ್ಟಣದ ಈ ದಿನದ ರಾತ್ರಿ ಎಂಥ ಸುಖಾಗಮನ ಕರವಾದುದು! ಎಂದು ಉದ್ಗಾರ ತೆಗೆದನು. ವಿಹಾರಕ್ಕಾಗಿ ಬರುವ-ಹೋಗುವ ಅಸಂಖ್ಯ ಜನಸಮುದಾಯವನ್ನು ನೋಡಿ ಇಂದಷ್ಟೇ ಹೊರಟಿರುವರೋ-ಇಲ್ಲವೆ ಪ್ರತಿದಿನವೂ ಹೀಗೆಯೊ ಎಂದು ಸಂಶಯ ಪಟ್ಟುಕೊಂಡನು. ಮಬ್ಬುಗತ್ತಲವನ್ನು ಬೆಳುದಿಂಗಳು ಅಪ್ಪಿಕೊಳ್ಳು ವಂತೆ ಬಿಳಿಬಟ್ಟೆಯ ಹೆಂಗುಸರು ಕರಿಯಂಗಿ ಧರಿಸಿದ ಗಂಡಸರನ್ನು ಅಪ್ಪಿ ಕೊಂಡು ಬರುವ ಅದೆಷ್ಟೊ ದಂಪತಿಗಳ ಜೋಡು ಸಾಲುಸಾಲಾಗಿ ನಗುತ್ತ ಕೆಲೆಯುತ್ತ ತಿರುಗಾಡುವದನ್ನು ಅವನು ತೀಕ್ಷ್ಣದೃಷ್ಟಿಯಿಂದ ನಿರೀಕ್ಷಿಸಿದನು.

ಪ್ರಶಾಂತವಾದ ಆಕಾಶದ ಕೆಳಗೆ ಹೊರಟಂಥ ಪ್ರಣಯಿಗಳ ಮೆರವಣಿಗೆಯೋಪಾದಿಯಲ್ಲಿ ಉದ್ದಕ್ಕೂ ಜೊತೆಗಾತಿಯರನೊಡಗೊಂಡು ಹೊರಟ ಜನಸಮುದಾಯವು ಬರುತ್ತಿತ್ತು; ಹೋಗುತ್ತಿತ್ತು. ಎಡೆಬಿಡದೆ ಬರಹೋಗುವವರ ದಟ್ಟಣೆ ಸಾಗಿತ್ತು. ನಸು ಬೆಚ್ಚಗೆನಿಸುವ ಸುಳಿ ಗಾಳಿಯು ಈ ದಂಪತಿಗಳ ಆಲಿಂಗನದ ಸುಖವನ್ನು ನೆನಪುಮಾಡಿ ಕೊಡು ತ್ತಿತ್ತು. ಎಂದಿನಕಿಂತಲೂ ಇಂದಿನ ಅಪ್ಪುಗೆಗಳಲ್ಲಿ ಸುಖಾವಹ ವಾತಾವರಣದ ಪ್ರವೇಶವಿದ್ದುದರಿಂದ ಬಹು ಮನೋಹರವಾದ ನೋಟವು ಕಣ್ಣಿಗೆ ಹಬ್ಬವನ್ನುಂಟುಮಾಡಿತ್ತು. ನೈಸರ್ಗಿಕ ಸೌಂದರ್ಯದಧಿ ದೇವತೆ ಇಂದು ಅಲ್ಲಿ ತಿರುಗಾಡುವವರ ಮೈತುಂಬಿ ಬಂದವಳಂತೆ ಸೊಗ ಸನ್ನು ಬೀರಿದ್ದಳು.

ಲೇವಾಸನು ಮನದಿಂದ ತಣಿದವನಾಗಿದ್ದರೂ-ದೇಹದಿಂದ ನಡೆ ನಡೆದು ದಣಿದನು. ವಿಹಾರಕ್ಕಾಗಿರಿಸಿದ ಒಂದು ಸುಖಾಸನದಲ್ಲಿ ಕುಳಿ ತನು ದೃಷ್ಟಿ ಮಾತ್ರ, ಪ್ರೇಮದ ಭಾರದಿಂದ ತೊನೆದಾಡುತ್ತಿದ್ದ ವಿಹಾರಿ ಗಳ ಕಡೆಗೇ ನೆಟ್ಟು ಹೋಗಿತ್ತು.

ಆವನ ಬದಿಯಲ್ಲಿಯೋ ಅದೇ ಆಸನದಲ್ಲಿಯೋ ನಡುಹರೆಯದ ವಿದುಷಿಯೊಬ್ಬಳು ಬಂದು ಯಾವಾಗ ಕುಳಿತುಕೊಂಡಿದ್ದಳೋ ಏನೋ ಆವನ ಲಕ್ಷ್ಯಕ್ಕೆ ಬಂದಿರಲಿಲ್ಲ

ಆವನ ತನ್ಮಯ ದೃಷ್ಟಿಯನ್ನು ತನ್ನೆಡೆಗೆ ಎಳೆಯಬೇಕೆಂದು ಅವಳು 'ಮನೋಹರನೇ, ಪ್ರಿಯಾ........' ಎಂದು ಮನಮೆಚ್ಚುವ ಸಣ್ಣ ದನಿಯಲ್ಲಿ ನುಡಿದಳು.

ಏಕ ದೃಷ್ಟಿಯು ಕದಡಿತು; ಆದರೂ ಆವನು ಕೇಳಸದವರಂತೆ ಕುಳಿತಿದ್ದನು. ಯಾವ ಮರುಮಾತನ್ನೂ ಆಡಲಿಲ್ಲ.

ಮತ್ತೆ ಅವಳು 'ನನ್ನ ಜೀವ ನಿನಗಾಗಿ ಮುಡುಪಾಗಿದೆ; ನನ್ನ ಜೀವಕ್ಕಿಂತಲೂ ಹೆಚ್ಚಾಗಿ ನಿನ್ನನ್ನು ಪ್ರೀತಿಸುತ್ತೇನೆ' ಎಂದೆನ್ನುತ್ತ ಆವಳು ಅವನ ತೀರ ಹತ್ತಿರಕ್ಕೆ ಹೋದಳು.

'ನೀನು ತಪ್ಪು ನಡೆಯುತ್ತೀ' ಎಂದು ಅವಳ ಕಡೆಗೆ ಅವನು ಮುಖವನ್ನು ಕೂಡ ತಿರುಗಿಸದೆ ಗೊಣಗಿದನು.

ಅವಳದನ್ನೂ ಲೆಕ್ಕಿಸದೆ ತನ್ನ ಕೈಯನ್ನು ಅವನ ಕೈಯಲ್ಲಿರಿಸಿ:—

'ಇಷ್ಟಾದರೂ – ದಯಬಾರದೇ? – ಪ್ರೀತಿ ಹುಟ್ಟದೇ?– ನನ್ನನ್ನು ನೋಡು' ಎಂದು ಅಪ್ಪಿಕೊಳ್ಳಬೇಕೆಂದು ಹವಣಿಸಿದಳು.

ಅಷ್ಟರಲ್ಲಿ ಅವನು ಜಗ್ಗನೆದ್ದನು. ಕುಕ್ಕೋಟದಿಂದ ಮುಂದೆ ಸಾಗಿದನು; ತಲೆತುಂಬ ವಿಚಾರ ತುಂಬಿಕೊಂಡು ಗಟ್ಟಿ ಎದೆಯಿಂದ ಈ ಪ್ರಸಂಗದ ಅರ್ಥವೇನಿರಬಹುದೆಂದುಕೊಳ್ಳುತ್ತ ಮುಂದೆ ನಡೆದನು.

ಹತ್ತಿಪ್ಪತ್ತು ನಿಮಿಷ ಮುಂದೆ ಸಾಗಿರುವಷ್ಟರಲ್ಲಿ ಮತ್ತೊಬ್ಬ ಲಲನಾಮಣಿಯು ಅವನಿದಿರು ಬಂದು ನಿಂತಳು

'ಪ್ರಿಯಕರಾ, ಒಂದಿಷ್ಟು ನನ್ನ ಬಳಿ ಕುಳಿತುಕೊಳ್ಳಲು ಬರುವಿಯಾ? ಸಂತೋಷದಿಂದ ಕಾಲ ಕಳೆಯುವಾ' ಎಂದು ಕನಿಕರಪಟ್ಟು ಬೇಡಿಕೊಂಡಳು.

'ನೀನೇಕೆ ಈ ವ್ಯವಹಾರವನ್ನು ಮಾಡುತ್ತೀ' ಎಂದು ಅವನು ನಗುನಗುತ್ತ ಆಕೆಯನ್ನು ವಿಚಾರಿಸಿದನು.

ಅವಳು ಬಿರಿಬಿರಿ ಕಣ್ಣುಬಿಡುತ್ತ ನೆಟ್ಟಗೆ ಅವನಿದಿರು ನಿಂತಳು; ದನಿ ಗಡುಸಾಯಿತು. ಮೂದಲಿಸುವ ದನಿಯಲ್ಲಿ 'ಅಯ್ಯೋ! ನಾನು ಮೋಜಿಗಾಗಿ ಮಾಡುವವಳಲ್ಲ ತಿಳಿಯಿತೇ?' ಎಂದಳು.

'ಹಾಗಾದರೆ, ಮತ್ತಾವ ಕಾರಣಗಳಿಗಾಗಿ ನೀನು ಮಾಡುವುದು' ಎಂದು ಅವನು ನಿರ್ವಿಕಾರ ಚಿತ್ತದಿಂದ ಕೇಳಿದನು.

'ಹುಟ್ಟಿ ಬಂದುದಕ್ಕೆ ಬಾಳಬೇಕು. ಎಂಥ ದೈವವಿದ್ದರೂ........' ಎಂದು ಅವಳು ತುಟಿಯಲ್ಲಿಯೇ ...ಯಾವುದೋ ಒಂದು ಹಾಡನ್ನು ಅಂದು ಕೊಳ್ಳುತ್ತ ಮತ್ತೊಂದು ಬೇಟೆಕಾಗಿ ಮುಖ ತಿರುಗಿಸಿ ಹಾದಿಹಿಡಿದಳು.

ಲೇವಾಸನು ಗೊಂದಲಗೆಟ್ಟನು. ಯಾವದೂ ತೋಚದಾಯಿತು. ಇನ್ನೂ ಹಲವು ಹೆಂಗಸರು ಅವನ ಮುಂದೆ ಸುಳಿದಾಡಿದರು; ಸನ್ನೆ ಮಾಡಿದರು; ಕಣ್ಣು ಹಾರಿಸಿದರು–ಅವನಿಗೆ ಕೈಗಳನ್ನು ಮುಗಿದರು. ನೀಲಿಕೆಟ್ಟ ಭಾರವಾದ ಸುದ್ದಿಯು ತನ್ನ ತಲೆಯ ಮೇಲೆ ತಾಳಗೆಟ್ಟು ಕುಣಿಯುತ್ತಿರುವಂತೆ ಅವನಿಗೆ ಅದೆಲ್ಲವೂ ಚಿತ್ರ ವಿಚಿತ್ರವಾಗಿ ಭಾಸ ವಾಯಿತು; ಅದೇಕೆ ಪ್ರತ್ಯಕ್ಷ ಅನುಭವಿಸಿದನು. ಮತ್ತೂ ಮುಂದೆ ಸಾಗುವದನ್ನು ಬಿಡಲಿಲ್ಲ.

ಬೆಂಚಿನ ಮೇಲೆ ತಲೆಯನ್ನು ಹಿಡಿದುಕೊಂಡು ಕುಳಿತನು. ನಾನಾ ತರಹದ ವಾಹನಗಳು ಪ್ರೇಮಾನಂದದ ಗಾಳಿಯಿಂದ ಹಗುರಾಗಿ ವೇಗ ದಿಂದ ಬರಹೋಗುವ ನೋಟವು ಅವನನ್ನು ಮತ್ತೆ ಭ್ರಮೆಯಲ್ಲಿ ಕೆಡವುತ್ತಿದ್ದಿತು

'ಇಂದು ಯಾವ ದೇವರು ಬುದ್ಧಿಕೊಟ್ಟನೋ ನನಗೆ. ತಿರುಗಾ ಡಲು ನಾನೇಕೆ ಬಂದೆ?–ನಾನು ಹಾಳಾದೆ' ಎಂದು ವಿಚಾರಗಳ ಮಾಲೆ ಯನ್ನು ಹೆಣೆಯಹತ್ತಿದನು.

ಈ ವೈಷಯಿಕ ಪ್ರೇಮ, ಬೌದ್ಧಿಕ ಪ್ರೇಮ, ನಿಸರ್ಗಸಿದ್ಧವಾದ ಸಹಜ ಪ್ರೇಮ! ಬೆಲೆ ಕೊಟ್ಟು ಕೊಂಡುಕೊಂಡ ನಾನಾತರಹದ ಮುದ್ದುಗಳು, ಆಲಿಂಗನಗಳು ಇವೇ ಮೊದಲಾದ ಶೃಂಗಾರಮಯ ಜೀವನದ ಪ್ರತ್ಯಕ್ಷ ಚಿತ್ರವು ಅವನ ಕಣ್ಮುಂದೆ ನಿಂತಿತು; ಎದೆಯಲ್ಲಿ ನೆಟ್ಟಿತು.

ಪ್ರೇಮ ! ಪ್ರೀತಿ ! ಅವನಿಗೆ ಇದಾವುದರ ಗಂಧವು ಕೂಡ ಈ ವರೆಗೆ ಹತ್ತಿರಲಿಲ್ಲ. ಅನಪೇಕ್ಷೆಯಿಂದ, ಪ್ರಯತ್ನವಿಲ್ಲದೆ, ದಾರಿಯಲ್ಲಾದ ಸಹಜ ದರ್ಶನದಲ್ಲಿ ಒಬ್ಬಿಬ್ಬ ಹೆಣ್ಣುಮಕ್ಕಳ ಹಾರಿಕೆಯ ಬಲವಂತವಾದ ಪರಿಚಯವು ಅವನ ಇಡೀ ಜೀವನಲ್ಲಿ ಒದಗಿದುದಷ್ಟೇ ಅಲ್ಲದೆ, ಬೇರೆ ಸಂಭವಿಸಿರಲೇ ಇಲ್ಲ. ಸಾಂಪತ್ತಿಕ ಸ್ಥಿತಿಯು ಜೋಡು-ಜೀವನದ ಸೊಬಗಿನ ಬಾಳನ್ನು ಪಭೋಗಿಸಲು ಅವಕಾಶ ಕೊಟ್ಟಿರಲಿಲ್ಲ. ಈಗಾಗಲೆ ಕಳೆದ ದಿನಗಳಿಗಾಗಿ, ಬಾಳಿಗಾಗಿ ಮಿಡುಕಿದನು; ತನ್ನದು ಇನ್ನುಳಿದ ಬೇರೆ ಜನರ ಜೀವನದಿಂದ ಎಷ್ಟು ಭಿನ್ನ! ಎಂಥ ವಿರಸ!-ಅಸಂಬದ್ಧವಾಗಿದೆ ಯೆಂದು ನೊಂದುಕೊಂಡನು. ತನ್ನದು ಬರಿ ಬಾಳು, ಸುಖ ಸವಿಯುದ ಸಪ್ಪೆ ಬಾಳು ! ಒಂಟಿ ಜೀವನವೆಂದು ಮನದಲ್ಲಿಯೇ ಹಳಿದುಕೊಂಡನು.

ಜಗದೊಳಗೆ ದೈವವಿದ್ದವರೂ-ಇಲ್ಲದಿದ್ದವರೂ ಇರುತ್ತಾರೆ; ಬದುಕುತ್ತಾರೆ. ಕೆಲವರು ದೈವವಿದ್ದೂ ದತ್ತಗೇಡಿಗಳಿರುತ್ತಾರೆ. ದರಿದ್ರರಿದ್ದರೂ ದೈವ ತೆರೆದವರಿರುತ್ತಾರೆ. ಅದೇನೊ ಒಮ್ಮೆಲೆ ಮನಸಿನ ದುಗುಡುತನದ ಪಡದೆಯು ಕಳಚಿಬಿದ್ದಿತು; ಭೂತ-ವರ್ತಮಾನ-ಭವಿಷ್ಯತ್ ಕಾಲಗಳ ಜೀವನವು ಅವನಿಗೆ ಭಯಭೀತಿಯನ್ನುಂಟುಮಾಡಿತು. ಏಕರೀತಿಯ ಜೀವನದ ನಿಸ್ಸಾರಮನದ ದುಃಖವು ಅವನಿಗೆ ಉಕ್ಕಿ ಬಂದಿತು. ಹಣೆ ಹಣೆ ಬಡಿದುಕೊಂಡನು. ಕಳೆದ ದಿನಗಳಂತೆ ಮುಂದಿನ ದಿನಗಳು ಹೆಸರಿಗೆ-ಲೆಕ್ಕಕ್ಕುಳಿದಿರುವ ಕಡೆಯ ದಿನಗಳು, ಏನಿದೆ? ಹಿಂದಿಲ್ಲ-ಮುಂದಿಲ್ಲ. ಎಲ್ಲವೂ ಬರಿದು. ಬೈಲಿಗೆ ಬೈಲೇ, ಗಾಳಿಗೆ ಗಾಳಿಯೇ. ಈ ಜಗತ್ತು ಅವನ ಪಾಲಿಗೆ ಶೂನ್ಯಮಯವು.

ಇಷ್ಟಾದರೂ ಇನ್ನೂ ಗಾಡಿಗಳ ಸಾಲುಗಳು ಒಂದರ ಹಿಂದೊಂದು ಬರುತ್ತಲೇ ಇವೆ. ಅಲ್ಲಿ ಅವನಿಗೆ ಕಾಣುವ ಚಿತ್ರಗಳೇನು-ಪ್ರಸನ್ನ ಮುಖ ಮುದ್ರೆಯಿಂದ ಒಲವು - ನಲಿವುಗಳ ಚಿನ್ನಾಟದ ಅಪ್ಪುಗೆಗಳಲ್ಲಿದ್ದ ಜೋಡು ಜೀವನಗಳು ಪ್ರಕೃತಿ-ಪುರುಷರಂತೆ ತೋರುವವು; ಮರೆಯಾಗುವವು-ವಾಹನಗಳ ತೀವ್ರ ವೇಗದಿಂದ. ಇಡಿಕಿಡಿ ಮಾನವ ಜಾತಿಯೇ ಆನಂದೋತ್ಸಾಹ, ಸುಖ-ಸಮಾಧಾನಗಳಲ್ಲಿ ತನ್ನ ಮುಂದೆ

ಮೈದಾಳಿ ಬಂದು ನಿಂತಂತೆ ಅವನಿಗೆ ಕಂಡಿತು. ಒಬ್ಬನೇ ಏಕಾಕಿಯಾಗಿ ಏಕಮನಸಿನಿಂದ, ಏಕದೃಷ್ಟಿಯಿಂದ ಬಾಹ್ಯಸೃಷ್ಟಿಯ ಚಮತ್ಕಾರವಾದ ಹೂಟವನ್ನು ನಿರೀಕ್ಷಿಸಿದನು. ಇಂದೂ ಒಬ್ಬನೇ, ಹಿಂದೆಯೂ ಒಬ್ಬನೇ ಮುಂದೆಯೂ ಒಬ್ಬನೇ. ಮೊದಲಿನಿಂದ ಕೊನೆಯುವರೆಗೆ ಒಬ್ಬನೇ ಆದರೆ ಜಗದಲ್ಲಿ ಮಾತ್ರ ಜೊತೆಯಿಲ್ಲದ ಬಾಳು ಗೋಳು. ಹಾಳು. ಜಗವು ಜೊತೆಯಿಂದಲೇ ಕೊನರುವದಿಲ್ಲವೇ ? ಫಲಿಸುವದಿಲ್ಲವೇ ?

ಭ್ರಮಿಷ್ಟನಂತೆ ಧಿಗ್ಗನೆದ್ದನು. ಮತ್ತೆ ಕೆಲವು ಹೆಜ್ಜೆಗಳನ್ನು ಮುಂದೆ ನೂಕಿದನು. ದಣುವಿನಿಂದ ತೀರ ಸೋತವನಾಗಿದ್ದನು. ಬಹು ದೂರದ ದಾರಿಯನ್ನು ತುಳಿದು ಬಂದವರಷ್ಟು ಕಾಲೆತ್ತಿಡಲು ಬಾರದಾಗಿ ಅಲ್ಲಿಯೇ ಮತ್ತೊಂದು ಬೆಂಚಿನ ಮೇಲೆ ವಿಚಾರಗ್ರಸ್ತನಾಗಿ ಕುಳಿತು ಕೊಂಡನು.

ಯಾವುದರ ಸಲುವಾಗಿ ಅವನು ದಾರಿ ಕಾಯುತ್ತಿದ್ದನು ? ಯಾವುದನ್ನು ಪಡೆಯುವದಕ್ಕೆ ಅವನು ಹಂಬಲಿಸುತ್ತಿದ್ದನು ? ಯಾವುದಕ್ಕೂ ಇಲ್ಲ—ಏತಕ್ಕೂ ಇಲ್ಲ. ಇಳಿವಯಸಿನಲ್ಲಿ ಸಂಜೆಗೆ ಮನೆಗೆ ಬಂದೊಡನೆ ಎಳೆ ಮಕ್ಕಳು ನಗುತ್ತ ಕೆಲೆಯುತ್ತ ಮೈಮೇಲೆ ಅಡರುವ ಮುದ್ದು ಮಕ್ಕಳು—ಮರಿಗಳ ಬಾಲ್ಯಜೀವನದಿಂದ ಎಷ್ಟು ಸುಖವಾಗುತ್ತಿತ್ತೆಂಬುದರ ಕಲ್ಪನಾ-ಸಾಮ್ರಾಜ್ಯವನ್ನು ಅವನು ಆಳುತ್ತಿರಬಹುದೇ ? ತನಗಾಗಿಯೇ ಜೀವನ ಸರ್ವಸ್ವವನ್ನು ಅರ್ಪಿಸಿದವರ ಮಧ್ಯದಲ್ಲಿ, ಪ್ರೀತಿಸುವವರ ಸಂಪರ್ಕದಲ್ಲಿ, ಸಂರಕ್ಷಣೆಯ ಭಾರ ವಹಿಸಿದವರಲ್ಲಿ, ಮೈ—ಮನಗಳನ್ನು ತಣಿಸುವವರ ಉತ್ಸಾಹದಲ್ಲಿ ಮಾಸವನು ಹುಟ್ಟುವುದು, ಬೆಳೆಯುವದು ಎಷ್ಟು ರಮ್ಯವಾದ ಜೀವನವೆಂದು ಅವನು ಲೆಕ್ಕವನ್ನು ಹಾಕುತ್ತಿರಬಹುದೋ ! ಏನೋ ಯಾರು ಬಲ್ಲರು ?

ಕತ್ತಲುಗವಿಯಾದ ಕೋಣೆಯು—ತನ್ನೊಬ್ಬನಿಗಾಗಿಯೇ ವಿಶಾಸಲಾಗಿರಿಸಿದ ಕೋಣೆಯು ನೆನಪಾಗಿ ಇನ್ನಿಷ್ಟು ಅವನನ್ನು ಕುಗ್ಗಿಸಿತು. ಹೌಹಾರಿಸಿತು. ಅದರಂತೆ ತನ್ನ ಹೊಟ್ಟೆಗೆ ಹಾಕುವ ಆ ಕಚೇರಿ, ಆ ಕೆಲಸ ನೆನಪಾಗಿ ಹುರುಡಿಲ್ಲದೆ ಜೀವನವು ಕಳೆದು ಹೋದುದಕ್ಕಾಗಿ ವಿಸ್ಮಯ

ಪಟ್ಟುಕೊಂಡನು. ಈ ಕಚೇರಿಯ ಸುತ್ತುಮುತ್ತು ಎಂದೂ ಯಾರೂ ಸುಳಿದಿರಲಿಲ್ಲ. ಸುಡುಗಾಡಿನಂತೆ ಹಾಳು ಹಾಳು ಸುರಿಯುತ್ತಿತ್ತು. ಜಡಪದಾರ್ಥಗಳಾದ ಗೋಡೆ, ಕಿಡಿಕಿ, ಬಾಗಿಲ-ಮೊದಲಾದವುಗಳಲ್ಲಿ ಒಂದೊಂದು ತರದ ಜೀವಂತ ಕಳೆಯು ತುಂಬಿರುವದಿಲ್ಲವೇ? ಅವುಗಳಲ್ಲಿ ವಾಸಿಸುವಹರ ಉಪಯೋಗಕ್ಕಾಗಿ ನಿರ್ಮಾಣವಾಗಿಲ್ಲವೇ? ಮಿಡುಕು-ತೊಡಕುಗಳಿಗೆ ತವರುಮನೆಯಾದ ಕೆಲವು ಕುಟುಂಬಗಳಿಗಿಂತ, ಸಂತಾನ ಸುಖಸಂಪತ್ತುಗಳಿಂದ ನಲಿದಾಡುವ ಕುಟುಂಬಗಳು ಎಷ್ಟು ನಯನ ಮನೋಹರವಾದವುಗಳು! ಹಾಳು ಹಾಳು ಸುರಿಯುವ ತನ್ನ ಜೀವನದ ಪ್ರತಿಬಿಂಬವೇ ಆ ಕಚೇರಿ ಎಂದು ಅವನಿಗೆ ಕಂಡಿರಬಹುದಲ್ಲವೇ? ಕೋಣೆ-ಕಚೇರಿ ಇವೆರಡೇ ತನ್ನ ಶಾಶ್ವತವಾದ ಸ್ಮರಣೆಗಳು-ಬಾಳಿನ ಚಿತ್ರ. ಈ ತನ್ನ ತಿರುಗಣಿ ಮಡುವಿನೊಳಗಿಂದ ದಾಟಲಾರದವನಾಗಿ- ಅಸಾಧ್ಯವಾದ ಮಾರ್ಗವೆಂದು ನಿರ್ಧರಿಸಿ-ಮರಳಿ ಗೂಡುಸೇರಬೇಕೆಂದು ಎದ್ದನು. ಆ ಸ್ಥಳ ಬಿಟ್ಟು, ಮುಂದೆ ೮-೧೦ ಹೆಜ್ಜೆಗಳಸ್ಟಿಕ್ಕಿರಬಹುದು-ಅಷ್ಟರಲ್ಲಿ ಆ ಹಸರು ಮುರಿಯುವ ಎಳೆ ಹುಲ್ಲಿನ ಮೇಲೆ ಮತ್ತೆ ಕುಳಿತುಕೊಳ್ಳಬೇಕೆಂದೆನಿಸಿತು; ಹೋಗಿ ಕುಳಿತುಕೊಂಡನು. ಅವನಿಗೆ ಕಿವಿಯಲ್ಲಿ ಒಂದೆ ಸವನೆ ಕೇಳಿಸಿದಂತಾಗುತ್ತಿತ್ತು. ಜೀವನದ ಗೂಢವಾದ-ಅಪಾರವಾದ ತಾಕಲಾಟ, ಹತ್ತಿರದ-ದೂರದ ಸಂತೋಷವಿಲ್ಲದ ಕೂಗಾಟ; ತಾಳಮೇಳವಿಲ್ಲದ ಜೀವನಕಲಹ ಎಂದು ಆರಂಭವಾಯಿತೊ - ಮುಗಿಯುವದೆಂದೋ - ಎಂಬ ಭಯದಿಂದ ನಡುಗಹತ್ತಿದನು ಹಲವು ತರದ ವಿಕಾರದ ಚೀತ್ಕಾರಗಳು ಮಾನವನನ್ನು ಗೊಂದಲಗೆಡಿಸಿ ದಗ್ಧಹೃದಯರನ್ನಾಗಿ ಮಾಡುವಂಥ ಈ ಬಾಳು ಅವನನ್ನು ಎಂಥ ಅವಸ್ಥೆಗೆ ತಂದುಬಿಟ್ಟದ್ದಿತೋ ದೇವನೇ ಬಲ್ಲ! ಪ್ಯಾರಿಸ್ ಪಟ್ಟಣವೇ ಅವನ ಪಾಲಿಗೆ ಬಹು ದೊಡ್ಡ ಪ್ರಾಣಿಯು ರಭಸದಿಂದ ಉಸಿರಾಡಿಸುವಂತೆ ಕಾಣುತ್ತಿತ್ತು.

‡ ‡ ‡ ‡

ಸೂರ್ಯನು ತನ್ನ ಜಗಜಗಿಸುವ ಪ್ರಕಾಶದಿಂದ ಇಡಿಕಿಡೀ

ವಾತಾವರಣವನ್ನೆ ಬೆಳಗಿಸಹತ್ತಿದ್ದಾನೆ. ಮುಚ್ಚುಂಜೆಯ ಓಡಾಟವು ದಿನ ದಂತೆ ಆರಂಭವಾಗಿದೆ. ಮಿತಿಮೀರಿದ ದಟ್ಟಣೆಯು ಬೀದಿಯಲ್ಲಿ ಇನ್ನೂ ಸುರುವಾಗಿರಲಿಲ್ಲ. ಆಲ್ಲೊಂದು ಇಲ್ಲೊಂದು ಬರಹೋಗುವ ವಾಹನ ಗಳು ಹರುಷವನ್ನು ಹೊತ್ತುಕೊಂಡು ಈಗೀಗ ತಲೆದೋರಹತ್ತಿವೆ. ತಿರುಗಾಡುವ ಕೆಲ ಜನರೂ ನಗುವ ಮುಖದಿಂದ ಬೀದಿಯಲ್ಲಿ ಕಾಣ ಹತ್ತಿದ್ದಾರೆ.

ತೀರ ಏಕಾಂತದ ಸ್ಥಳದಿಂದ ಇನ್ನೂ ಅರಿಸಿಣ ಆರದ ಒಂದು ಜೊತೆ ಉಲ್ಹಾಸಿತವದನದಿಂದ ಹೊರಬಿತ್ತು. ಅಕಸ್ಮಾತ್ತಾಗಿ ಸಮೀಪದ ಗಿಡದ ಟೊಂಗೆಯಲ್ಲಿ ಕಂದೀ ಬಣ್ಣದ ಯಾವುದೋ ಒಂದು ಪದಾರ್ಥವು ಆ ಯುವತಿಯು ಕಣ್ಣಿಗೆ ಕಂಡಿತು. ತಿರುಗಾಟದ ಹುರುಪು ಕುಗ್ಗಿ ದಂತಾಗಿ ಬೆರಗುಗಣ್ಣುಗಳಿಂದ, ಅತ್ತ ಕಡೆಗೆ ಅವಳು ಕೈ ಮಾಡುತ್ತ 'ನೋಡು ಅಲ್ಲಿ........ಏನೋ........ಇದೆ .......ಏ .......ನಿ........ರ.... ಬ ...ಹು....ದು....' ಎಂದು ತೋರಿಸಿದಳು.

ಅಲ್ಪಾವಧಿಯಲ್ಲಿಯೇ, ಅದಾರೋ ಒಬ್ಬ ಗಂಡಸು ಚಣ್ಣದ ಲಾಡಿ, ವಸ್ತ್ರಗಳಿಂದ ಉರುಲು ಹಾಕಿಕೊಂಡಿರುವೆನೆಂದು ತಿಳಿದು ಬಂದಿತು. ಅವನು ನಿನ್ನಿನ ರಾತ್ರಿಯೇ ಆತ್ಮಹತ್ಯೆ ಮಾಡಿಕೊಂಡಿರಬೇಕೆಂದು ಕಲ್ಪಿಸಿ ದರು. ಕಿಸೆಯೊಳಗಿನ ಕಾಗದಗಳ ಮೇಲಿಂದ ಆವನು ಲ್ಯಾಬೂಜ್ ಕಂಪನಿಯಲ್ಲಿಯ ಕಾರಕೂನನು. ಹೆಸರು ಲೇವಾಸನೆಂದು ಸ್ಪಷ್ಟವಾಗಿ ಗುರುತು ಸಿಕ್ಕಿತು. ಅವನಿಗೆ ಆತ್ಮಹತ್ಯೆಯ ರೂಪ ತಾಳಿ ಸಾವೇಕೆ-ಬಂದಿತೋ-ಯಾರು ಹೇಳಬಲ್ಲರು ?

ತಾತ್ಕಾಲಿಕ ಹುಚ್ಚಿನಿಂದಾದ ಪರಿಣಾಮದ ಫಲವಿದ್ದರೂ ಇರಬಹುದು.

## ಲಲಿತ ಸಾಹಿತ್ಯ ಮಾಲೆ

**ವರುಷಕ್ಕೆ ನೂರು ನೂರು ಪುಟದ ಆರು ಪುಸ್ತಕಗಳು**

ಚಂದಾ : ಅಂಚೆಸೇರಿ ಮೂರು ರೂಪಾಯಿ

ವಿಳಾಸ :

**ಲಲಿತ ಸಾಹಿತ್ಯಮಾಲೆ, ಧಾರವಾಡ**
**ಮನೋಹರ ಗ್ರಂಥ ಭಾಂಡಾರ, ಧಾರವಾಡ**
**ಕನ್ನಡ ಪುಸ್ತಕಾಲಯ, ಬೆಳಗಾವಿ**